ಕಾಯಕವೇ ಕೈಲಾಸ



# ಸಿದ್ಧಗಂಗಾ



## ಯುಗಾದಿ ಹಬ್ಬದ ಹಾರ್ದಿಕ ಶುಭಾಶಯಗಳು

ಸಂಪುಟ : ೫೮ ಏಪ್ರಿಲ್ ೨೦೨೨ ಸಂಚಿಕೆ : ೦೪



ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಲಿಂ. ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ**

**೧೧೫ನೇ ಜನ್ಮದಿನೋತ್ಸವದ**

ಶುಭ ಸಂದರ್ಭದಲ್ಲಿ ಪರಮಪೂಜ್ಯ ಶ್ರೀಗಳವರ ದಿವ್ಯ ಶಿವಚರಣಗಳಿಗೆ ಅನಂತ ಕೋಟಿ ಭಕ್ತರ ಭಕ್ತಿಪೂರ್ವಕ ಪ್ರಣಾಮಗಳು



ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿ ನಿರ್ಮಾಣದ ತಳಪಾಯ ಕಾಮಗಾರಿಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಫೆಬ್ರವರಿ ೧೫ ರಂದು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಲೋಕೋಪಯೋಗಿ ಸಚಿವರಾದ ಶ್ರೀ ಸಿ.ಸಿ. ಪಾಟೀಲ್, ರಾಜ್ಯ ಬಿಜೆಪಿ ಉಪಾಧ್ಯಕ್ಷರಾದ ಶ್ರೀ ಬಿ.ವೈ. ವಿಜಯೇಂದ್ರ, ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಎಂ. ರುದ್ರೇಶ್ ಮೊದಲಾದವರು ಉಪಸ್ಥಿತರಿದ್ದರು.




ಫೆಬ್ರವರಿ ೨೬ ರಂದು ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಸುವರ್ಣ ಮಹೋತ್ಸವ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು. ಈ ಸಂದರ್ಭದಲ್ಲಿ "ಸುವರ್ಣ ದರ್ಶನ" ಸ್ಮರಣಸಂಚಿಕೆಯನ್ನು ಲೋಕಾರ್ಪಣೆ ಮಾಡಿದ ಕರ್ನಾಟಕ ಪ್ರದೇಶ ಗಡಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ. ಸಿ. ಸೋಮಶೇಖರ್, ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಎಂ. ರುದ್ರೇಶ್ ಹಾಗೂ ಪ್ರೊ. ಬಿ. ಗಂಗಾಧರಯ್ಯ ಅವರು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ


# ಸಿದ್ಧಗಂಗಾ

ಸಂಪುಟ : ೫೮ ಏಪ್ರಿಲ್ ೨೦೨೨ ಸಂಚಿಕೆ : ೦೪

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.
ಮೊ : ೯೧೪೧೦ ೩೬೩೪೫


## ಒಳಪುಟಗಳಲ್ಲಿ ...................




| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/- <br> ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |
|---|---|


email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಭಾರತೀಯ ಆಧ್ಯಾತ್ಮಿಕ ಇತಿಹಾಸದಲ್ಲಿ ಏಪ್ರಿಲ್ ೧, ಸುವರ್ಣಾಕ್ಷರಗಳಲ್ಲಿ ದಾಖಲಿಸುವಂತಹ ಪವಿತ್ರವಾದ ಪುಣ್ಯದಿನ. ಶರಣ ಸಂಸ್ಕೃತಿಯ ಮಹಾಜ್ಯೋತಿ, ಆಧ್ಯಾತ್ಮದ ಮೇರುಶಿಖರ, ಜ್ಞಾನಜ್ಯೋತಿ, ಮಹಾಮಾನವತಾವಾದಿ, ವಾತ್ಸಲ್ಯಮೂರ್ತಿ, ಕರುಣಾಸಾಗರ, ನಡೆದಾಡುವ ದೇವರು, ಭಕ್ತರ ಹೃದಯ ಸಿಂಹಾಸನದಲ್ಲಿ ಉನ್ನತ ಸ್ಥಾನವನ್ನು ಪಡೆದಿರುವ, ನಮ್ಮೆಲ್ಲರ ಆರಾಧ್ಯದೈವ, ತ್ರಿವಿಧ ದಾಸೋಹಮೂರ್ತಿ, ಮಹಾತಪಸ್ವಿ, ವಿಶ್ವರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲೋಕ ಕಲ್ಯಾಣಕ್ಕಾಗಿ ಈ ಭುವಿಯಲ್ಲಿ ಅವತರಿಸಿದ ಪುಣ್ಯದಿನ. ಪೂಜ್ಯರು ಭೌತಿಕವಾಗಿ ಇಂದು ನಮ್ಮೊಂದಿಗಿದ್ದಿದ್ದರೆ ೧೧೫ನೇ ಜನ್ಮದಿನವನ್ನು ಸಂತೋಷ, ಸಂಭ್ರಮ, ಭಕ್ತಿಯಿಂದ ಆಚರಿಸುವ ಭಾಗ್ಯ ನಮ್ಮದಾಗುತ್ತಿತ್ತು. ಆದರೆ ಅವರ ಅನುಪಸ್ಥಿತಿಯಲ್ಲಿ ಆಚರಿಸಿ, ಬಿಟ್ಟುಹೋದ ಮಾನವೀಯ ಮೌಲ್ಯಗಳನ್ನು ಸ್ಮರಿಸುತ್ತಾ ಪರಮಪೂಜ್ಯರ ೧೧೫ನೇ ಜನ್ಮದಿನೋತ್ಸವ ಶುಭ ಸಂದರ್ಭದಲ್ಲಿ ಪೂಜ್ಯರ ಶಿವಚರಣಗಳಿಗೆ ಸಿದ್ಧಗಂಗಾ ಭಕ್ತಿ ಪುಷ್ಪಗಳನ್ನು ಸಮರ್ಪಿಸುವುದರ ಮೂಲಕ ಧನ್ಯತೆಯನ್ನು ಪಡೆಯುತ್ತಿದೆ.

ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಒಂದು ಧರ್ಮಪೀಠದ ಮೇಲೆ ೮೯ ವರ್ಷಗಳ ಸುದೀರ್ಘಕಾಲ ಕುಳಿತು ಲೋಕ ಕಲ್ಯಾಣಕ್ಕಾಗಿ ತಮ್ಮನ್ನು ಅರ್ಪಣಾಭಾವದಿಂದ ಸಮರ್ಪಿಸಿಕೊಂಡವರು. ಪೂಜ್ಯ ಶ್ರೀಗಳವರ ದೂರದೃಷ್ಟಿ, ಕ್ರಿಯಾಶೀಲತೆ, ಸಾಮಾಜಿಕ ಕಳಕಳಿ, ಜೀವಕಾರುಣ್ಯ, ಕರ್ತೃತ್ವಶಕ್ತಿ, ದೀನ-ದಲಿತರ ಮೇಲಿನ ಪ್ರೀತಿ, ಕಾಳಜಿ, ಅನನ್ಯವಾದುದು. ಗ್ರಾಮೀಣ ಪ್ರದೇಶದ ಲಕ್ಷಾಂತರ ಬಡ ಮಕ್ಕಳಿಗೆ ಅಕ್ಷರ ಜ್ಞಾನದ ಜತೆಗೆ ನೈತಿಕ ಶಿಕ್ಷಣವನ್ನು ನೀಡಿ ಜಗತ್ತಿನಾದ್ಯಂತ ನಮ್ಮ ಸಂಸ್ಕೃತಿಯ ರಾಯಭಾರಿಗಳನ್ನಾಗಿ ಮಾಡಿದ ಶಿಕ್ಷಣ ತಜ್ಞರು, ಶಿಕ್ಷಣ ಪ್ರೇಮಿಗಳು.

ಮಾನವೀಯ ಮೌಲ್ಯಗಳು ಶಿಥಿಲವಾಗುತ್ತಿರುವ ಇಂದಿನ ವಿಷಮ ಸನ್ನಿವೇಶದಲ್ಲಿ ಮಾನವೀಯ ಸೇವೆಯೇ ಲೋಕದೊಡೆಯ ಪರಶಿವನ ಪೂಜೆಯೆಂದು ಭಾವಿಸಿ, ಅದರಂತೆ ನಡೆದು ತೋರಿಸಿದ ಪರಮಪೂಜ್ಯ ಶ್ರೀಗಳು ಮಠಾಧಿಪತಿಗಳಿಗೆ ಆದರ್ಶವಾಗಿದ್ದರು. ಸ್ಫೂರ್ತಿಯಾಗಿದ್ದರು. ಕಾವಿಗೆ ಒಂದು ಘನತೆ, ಗೌರವವನ್ನು ತಂದುಕೊಟ್ಟ ಲೋಕ ಜಂಗಮಮೂರ್ತಿಗಳು.

ಬಸವಾದಿ ಶರಣರ ಆದರ್ಶಗಳನ್ನು ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರೀಮಠದಲ್ಲಿ ಸಾಕಾರಗೊಳಿಸಿದ ಪುಣ್ಯಮೂರ್ತಿಗಳು. ೧೨ನೇ ಶತಮಾನದಲ್ಲಿ ಶರಣರು ಕಲ್ಯಾಣದಲ್ಲಿ ನಡೆಸಿದ ಸಮಾಜೋ ಧಾರ್ಮಿಕ ಪರಿವರ್ತನೆ, ದಾಸೋಹ ವೈಭವವನ್ನು ಮತ್ತೆ ನೋಡಿ ಕಣ್ಮನಗಳನ್ನು ತುಂಬಿಸಿಕೊಳ್ಳುವ ಮಹಾಭಾಗ್ಯವನ್ನು ನಮಗೆಲ್ಲ ಕರುಣಿಸಿದ್ದರು. ಸರ್ವಧರ್ಮಕ್ಕೆ ಜೀವಂತ ಸಾಕ್ಷಿಯಾಗಿರುವ ಶ್ರೀಮಠದಲ್ಲಿ ವಿವಿಧ ಜಾತಿ-ವರ್ಗಗಳಿಗೆ ಸೇರಿದ ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡಿದ ಕರುಣಾಮೂರ್ತಿಗಳು. ಶ್ರೀಮಠದಲ್ಲಿ ವ್ಯಾಸಂಗ ಮಾಡಿದ ಲಕ್ಷಾಂತರ ವಿದ್ಯಾರ್ಥಿಗಳು, ಪರಮಪೂಜ್ಯರ ದಿವ್ಯಾಶೀರ್ವಾದದಿಂದ ಅವರು ಕರುಣಿಸಿದ ಅರಿವಿನ ಜ್ಯೋತಿಯ ಪ್ರಭೆಯಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಸ್ವಾಭಿಮಾನದಿಂದ ಜೀವನ ನಡೆಸುತ್ತಿದ್ದಾರೆ.

* * *

ಏಪ್ರಿಲ್ ೧೪, ದಲಿತರ ಏಳಿಗೆಯ ಹರಿಕಾರ, ಭಾರತರತ್ನ ಡಾ. ಬಿ.ಆರ್. ಅಂಬೇಡ್ಕರ್ ಅವರ ಜನ್ಮದಿನ. ಈ ಶತಮಾನದಲ್ಲಿ ಆಗಿಹೋದ ಕ್ರಾಂತಿಕಾರಿ ಪುರುಷರಲ್ಲಿ ಡಾ. ಅಂಬೇಡ್ಕರ್ ಅವರದು ಎದ್ದು ಕಾಣುವ ಹೆಸರು. ಹುಟ್ಟಿನಿಂದಲೇ ಹೋರಾಟದ ಬದುಕನ್ನು ಪ್ರಾರಂಭಿಸಿದ ಅಂಬೇಡ್ಕರ್ ಅವರು, ಶತಶತಮಾನಗಳಿಂದ ಮೇಲು ವರ್ಗದವರ ದಬ್ಬಾಳಿಕೆಗೆ ತುತ್ತಾಗಿ ಮೌನದಿಂದ ನೋವನ್ನು ಅನುಭವಿಸಿ ಅಜ್ಞಾನ, ಅಂಧ ಶ್ರದ್ಧೆಗಳ ಸುಳಿಯಲ್ಲಿ ಸಿಕ್ಕಿ ತಮ್ಮತನವನ್ನು ಕಳೆದುಕೊಂಡವರ ಧ್ವನಿಯಾಗಿ ನಿಂತು ತಮ್ಮ ಜನಾಂಗದವರ ಸರ್ವತೋಮುಖ ಅಭಿವೃದ್ಧಿಗಾಗಿ ತಮ್ಮ ಜೀವನವನ್ನು ಸವೆಸಿದ ದಿಟ್ಟ ಹೋರಾಟಗಾರರು. ದಲಿತರಲ್ಲಿ ಮನೆ ಮಾಡಿಕೊಂಡಿದ್ದ ಅಜ್ಞಾನ, ಮೂಢನಂಬಿಕೆಯೆಂಬ ಕತ್ತಲೆಯನ್ನು ಓಡಿಸಿದ ಮಹಾಮಾನವತಾವಾದಿ. ಸಂವಿಧಾನ ರಚನೆ ಸಮಿತಿ ಕಾರ್ಯಾಧ್ಯಕ್ಷರಾಗಿ ಅವರು ನೀಡಿದ ಕೊಡುಗೆ ಅನನ್ಯ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**







# ಶ್ರೀವಾಣಿ

## ಮನಸ್ಸಿನ ಭಯ

ನಮ್ಮೊಳಗೆ ಒಬ್ಬ ಭಯಂಕರ ಶತ್ರುವು ಅಡಗಿದ್ದಾನೆ. ಅವನು ನಮ್ಮೊಳಗಿನ ಅಂತರಂಗ ಶತ್ರು. ನಮ್ಮ ಮನಸ್ಸು ದುರ್ಬಲವಾದಾಗ ದಾಳಿ ಮಾಡುತ್ತಾನೆ. ಆ ದಾಳಿಯಿಂದ "ನಮ್ಮ ಮೆದುಳಿನಲ್ಲಿರುವ ಕೋಟಿ ಕೋಟಿ ನರಕೋಶಗಳಲ್ಲಿ ಪ್ರತಿಕೂಲವಾದ ರಾಸಾಯನಿಕ ಕ್ರಿಯೆ ನಡೆಯುತ್ತದೆ. ಹೃದಯ ಬಡಿತ ಹೆಚ್ಚಾಗುತ್ತದೆ. ಉಸಿರಾಟದ ಗತಿ ಬಿಗಡಾಯಿಸುತ್ತದೆ. ಸ್ನಾಯುಗಳು ಗಡುಸಾಗುತ್ತವೆ. ಸುಪ್ತ ಪ್ರಜ್ಞೆಯ ಮೇಲೂ ಪ್ರಭಾವ ಬೀರಿ ವಿಚಿತ್ರ ವರ್ತನೆ ಶುರುವಾಗುತ್ತದೆ. ಋಣಾತ್ಮಕ ಚಿಂತನೆ ಜಾಸ್ತಿಯಾಗಿ ಉಸಿರೇ ನಿಂತು ಹೋಗಬಹುದು" ಇದು ಮನೋವಿಜ್ಞಾನಿಗಳ ಅನಿಸಿಕೆ.

ಶ್ರೇಷ್ಠ ಮನೋವಿಜ್ಞಾನಿಗಳಾದ ಭಗವಾನ್ ಬಸವಣ್ಣನವರು ಮನಸ್ಸಿನ ಭಯವನ್ನು ಕುರಿತು ವಚನವೊಂದರಲ್ಲಿ ಹೀಗೆ ವಿಶ್ಲೇಷಿಸಿದ್ದಾರೆ.

**"ಹುತ್ತದ ಮೇಲಣ ರಜ್ಜು ಮುಟ್ಟಿದಡೆ ಸಾವರು ಶಂಕಿತರು**
**ಸರ್ಪದಷ್ಟವಾದಡೆಯೂ ಸಾಯರು ನಿಶ್ಶಂಕಿತರಾದವರು**
**ಕೂಡಲಸಂಗಮದೇವಯ್ಯಾ**
**ಶಂಕಿತರಿಗೆ ಪ್ರಸಾದನಾಗಿ ಕಾಳಕೂಟ ವಿಷವು."**

**(ವ.ಸಂ. ೭೭೧. ಆರ್.ಸಿ. ಹಿರೇಮಠ ಸಂಪಾದನೆ)**

ಯಾರು ಮನಸ್ಸಿನ ತುಂಬಾ (ಶಂಕೆ) ಭಯವನ್ನೇ ತುಂಬಿಕೊಂಡಿರುವರೋ ಅಂಥವರಿಗೆ ಹುತ್ತದ ಮೇಲಿನ ಸರಬಿ ತಗುಲಿದರೆ ಸಾಕು, ಹಾವೇ ಕಚ್ಚಿತ್ತೆಂದು ಭಯಪಟ್ಟು ಸಾಯುತ್ತಾರೆ. ಪ್ರಸಾದದಲ್ಲಿ ವಿಷ ಇದೆ ಎಂದು ಸುಮ್ಮನೆ ಹೇಳಿದರೆ ಸಾಕು ಭಯಪಡುವವರಿಗೆ ಪ್ರಸಾದವೂ ವಿಷವಾಗುತ್ತದೆ. ಆದರೆ ಭಯವಿಲ್ಲದೇ ಇರುವ ಧೈರ್ಯಶಾಲಿಗಳು ಹಾವು ಕಚ್ಚಿದರೂ ಸಾಯುವುದಿಲ್ಲ.

ಇದಕ್ಕೊಂದು ಪ್ರಯೋಗದ ಸುದ್ದಿ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. "ಅಪರಾಧಿಯೊಬ್ಬನಿಗೆ ಕೋರ್ಟು ಗಲ್ಲು ಶಿಕ್ಷೆ ವಿಧಿಸಿತ್ತು. ಇನ್ನೇನು ಗಲ್ಲಿಗೇರಿಸುವ ಸಮಯದಲ್ಲಿ ಮನೋವಿಜ್ಞಾನಿಗಳ ತಂಡ ಆತನ ಮೇಲೆ ಪ್ರಯೋಗ ನಡೆಸಲು ಕೋರ್ಟಿನ ಅನುಮತಿಯನ್ನು ಕೇಳುತ್ತಾರೆ. ಕೋರ್ಟು ಅನುಮತಿ ಕೊಡುತ್ತದೆ. ಆಗ ವಿಜ್ಞಾನಿಗಳು ಪ್ರಯೋಗಶಾಲೆಗೆ ಆ ಅಪರಾಧಿಯನ್ನು ಕರೆತರುತ್ತಾರೆ. ಆತನನ್ನು ಕುರಿತು "ನೋಡು ನಿನ್ನನ್ನು ಹಾವು ಕಚ್ಚಿಸಿ ಸಾಯಿಸುತ್ತೇವೆ" ಎಂದು ಹೇಳಿ ಮುಖಕ್ಕೆ ಗೌನನ್ನು ಹಾಕುತ್ತಾರೆ. ಸಣ್ಣ ಗುಂಡು ಸೂಜಿಯನ್ನು ತೆಗೆದುಕೊಂಡು ಅದರಿಂದ ಅವನ ಅಂಗಾಲಿಗೆ ನಾಲ್ಕೈದು ಬಾರಿ ಚುಚ್ಚುತ್ತಾರೆ. ಅಷ್ಟರಿಂದಲೇ ಅವನು ಹಾವೇ ಕಚ್ಚಿತೆಂದು ಭಯಪಟ್ಟು ವಿಷವೇರಿ ಸಾಯುತ್ತಾನೆ."

ಬಸವಣ್ಣನವರು ಭಯ ನಿವಾರಣೆಗೆ ಧೈರ್ಯವೊಂದೆ ಸಾಧನ ಎಂಬುದಾಗಿ ತಮ್ಮ ಮತ್ತೊಂದು ವಚನದಲ್ಲಿ ಪರಿಹಾರವನ್ನು ಸೂಚಿಸಿದ್ದಾರೆ.

**"ಅಂಜಿದಡಾಗದು ಅಳುಕಿದಡಾಗದು, ವಜ್ರಪಂಜರದೊಳಗಿದ್ದಡಾಗದು**
**ಕಕ್ಕುಲತೆಗೆ ಬಂದಡಾಗದು ನೋಡಾ, ಧೃತಿಗೆಟ್ಟಡೆ ಮನಧಾತುಗೆಟ್ಟೊಡೆ**
**ಅಪ್ಪುದು ತಪ್ಪದು ನೋಡಾ, ಕೂಡಲಸಂಗಮ ದೇವಾ** ಎಂದಿದ್ದಾರೆ.

ನಾವು ಧನಾತ್ಮಕ ಚಿಂತನೆಗಳಿಂದ ಧೀಶಕ್ತಿಯನ್ನು ಹೆಚ್ಚು ಮಾಡಿಕೊಳ್ಳಬೇಕು. ಸುಪ್ರಭಾತ ಸಮಯದಲ್ಲಿ ಲಿಂಗವ ನೆನೆಯ ಬೇಕು, ಗುರುವ ಸ್ಮರಿಸಬೇಕು. ವಚನಗಳನ್ನು ಮಂತ್ರಗಳನ್ನು ಗಟ್ಟಿಯಾಗಿ ಪಠಿಸಬೇಕು. ಅವುಗಳಲ್ಲಿನ ಶಬ್ದಕಂಪನದ ತರಂಗಗಳ ಸ್ಪಂದನದಿಂದ ಧನಾತ್ಮಕ ಶಕ್ತಿ ಸಂಚಯನಗೊಳ್ಳುತ್ತದೆ. ಇದರಿಂದ ಭಯವು ತಪ್ಪುವುದು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ತನುವ ಮುಟ್ಟಿಹ ಮನ, ಮನವ ಮುಟ್ಟಿಹ ತನು**
**ತನು ಮನವ ಮುಟ್ಟಿಹ ಸರ್ವಕರಣಂಗಳು ನೋಡಾ**
**ಕಾಯದ ಕರಣಂಗಳು ಮುಟ್ಟಿಹ ಜೀವನ ನೋಡಾ**
**ಕಾಯದ ಕರಣಂಗಳ ಶುದ್ಧ ಪರಮಾತ್ಮಲಿಂಗದಲ್ಲಿ ಮುಟ್ಟಿಸಬಲ್ಲಡೆ,**
**ಅದೇ ಅರ್ಪಿತ ಅದೇ ಪ್ರಸಾದ ನೋಡಾ**
**ಆ ಪ್ರಸಾದಿ ಎಂದೂ ಪ್ರಳಯವಿರಹಿತನು ನೋಡಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ತನುವ ಮುಟ್ಟಿಹ ಮನ : ತನುವ-ಅಂಗವನು, ಮುಟ್ಟಿಹ-ಸೋಂಕಿಹ, ಮನ-ಮನಸ್ಸು, ಮನವ ಮುಟ್ಟಿಹ ತನು: ಮನವ -ಮನಸ್ಸನು, ಮುಟ್ಟಿಹ -ಸೋಂಕಿಹ, ತನು-ಅಂತವು ; ಮನವ -ಮನಸ್ಸನು, ಮುಟ್ಟಿಹ-ಸೋಂಕಿಹ, ಸರ್ವಕರಣಂಗಳು-ಸಕಲ ಕರಣಂಗಳು, ನೋಡಾ-ಕಂಡಾ; ಕಾಯದ-ದೇಹದ, ಕರಣಂಗಳ-ಸಕಲ ಕರಣಂಗಳ, ಮುಟ್ಟಿಹ-ಸೋಂಕಿಹ, ಜೀವನ ನೋಡಾ-ಪ್ರಾಣವು ಕಂಡಾ; ಕಾಯ-ದೇಹವು, ಜೀವ-ಪ್ರಾಣವು, ಕರಣಂಗಳ-ಸಕಲಕರಣಂಗಳ, ಶುದ್ಧ-ಸ್ವಚ್ಛವಾದ, ಪರಮಾತ್ಮ ಲಿಂಗದಲ್ಲಿ-ಮಹಾಲಿಂಗದಲ್ಲಿ, ಮುಟ್ಟಿಸಬಲ್ಲಡೆ-ಸಮರ್ಪಿಸಬಲ್ಲಡೆ, ಅದು ಅರ್ಪಿತ-ಅದು ಸಮರ್ಪಿತವು, ಅದೇ ಪ್ರಸಾದ ನೋಡಾ-ಅದೇ ಶಿವಪ್ರಸಾದವು ಕಂಡಾ; ಪ್ರಸಾದಿ ಎಂದೂ-ಶಿವಪ್ರಸಾದಿ ಎಂದೂ, ಪ್ರಳಯ ವಿರಹಿತನು-ಜನನಮರಣಂಗಳಿಗೆ ವಿಲಕ್ಷಣನು, ನೋಡಾ-ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

**(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)**

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹೂವಾಗು ಹಣ್ಣಾಗು ಒಳ್ಳೆ ಫಲನೀನಾಗು
ಬೆಳೆಯಾಗು ಮಳೆಯಾಗು ಹೊಳೆಯಾಗು । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಯಲ್ಲಿ ನಡೆಯಲ್ಲಿ ಎಡವದಿರು ನೀನೆಂದು
ಒಡಲ ತುಂಬಿದಗುರುವೆ ಕಡವರವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣರ ಹಿರಿಬಾಳು ಅರಿವಿನ ಮಂದಿರ
ನಿಡುತ ಸ್ಮರಣೆಯ ಮಾಡು ಮರೆಯದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶ್ರೀಮಠವೆ ನೀವಾಗಿ ನೀವೆ ಶ್ರೀಮಠವಾಗಿ
ಶ್ರೀಮಠದ ಜೀವ ಜೀವಾಳವಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚೆಂಗಾವಿಯ ಶ್ರೀ ಸೊಬಗಿಗೆ ಶ್ರೀ ಭಸಿತವ ಹೊಂಬೆಳಕೆ
ಗುರುಲಿಂಗ ಜಂಗಮ ಶ್ರೀ ವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಡುವ ಕಾಯಕದಿ ಮನಮಗ್ನವಾಗಿರಲಿ
ಕಲ್ಯಾಣದ ಶರಣರ ನಡೆಯಿರಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗದ ಮೇಲೆ ಲಿಂಗಧರಿಸಿದ ಮೇಲೆ
ಮಂಗಬುದ್ಧಿಗಳ ಬಿಡು ಎಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಬ್ರಾಹ್ಮಣ್ಯ' ಎಂಬುದು ಕುಲದಿಂದ ಬಂದುದಲ್ಲ
ಸಂಪತ್ತಿನಿಂದಲ್ಲ ನಡೆಯಿಂದ ಬಹುದೆಂದ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬುವಿಬಾನುಗಳಿಗಿಂತ ಶೀಲ ತಾ ದೊಡ್ಡದು
ಗುರುಲಿಂಗ ಜಂಗಮದ ಆಭರಣ । ಎನಿಸಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ಪರಮ ಕರುಣ ಸಿಂಧುವೆ ಬಂಧುವೆ
ಕರಮುಗಿದು ಬೇಡುವೆನು ಕರುಣಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



ವರದಿ

# ವೈಭವದಿಂದ ನಡೆದ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ

ಕಳೆದ ಎರಡು ವರ್ಷಗಳಿಂದ ಕೋವಿಡ್ ಮಹಾಮಾರಿಯಿಂದ ಸ್ಥಗಿತಗೊಂಡಿದ್ದ ರಾಜ್ಯದ ಪ್ರಸಿದ್ಧ ಜಾತ್ರೆಗಳಲ್ಲಿ ಒಂದಾದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರೆ ಮಹೋತ್ಸವ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಮಾರ್ಗದರ್ಶನ ಹಾಗೂ ಸಾನ್ನಿಧ್ಯದಲ್ಲಿ ಸಾಂಗವಾಗಿ ನಡೆಯಿತು. ಜಾತ್ರೆಯ ಅಂಗವಾಗಿ ಮಾರ್ಚ್ ೨ ರಂದು ಶ್ರೀಮಠದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವ ಲಕ್ಷಾಂತರ ಜನ ಭಕ್ತರ ಸಮ್ಮುಖದಲ್ಲಿ ವಿಜೃಂಭಣೆಯಿಂದ ನಡೆಯಿತು.

ಜಾತ್ರೆಯ ಅಂಗವಾಗಿ ನಡೆದ ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿ ಉತ್ಸವ, ಶೂನ್ಯಸಿಂಹಾಸನಾರೋಹಣೋತ್ಸವ, ವೃಷಭ ವಾಹನ, ನಂದಿವಾಹನ, ಗಜವಾಹನ, ಹುಲಿವಾಹನ, ಸಿಂಹವಾಹನ, ಹುತ್ತವಾಹನ, ಶೇಷವಾಹನ, ಅಶ್ವವಾಹನ, ನವಿಲು ವಾಹನ, ರಾವಣ ವಾಹನ, ಬಿಲ್ವವೃಕ್ಷ ವಾಹನ, ನವರಂಗಪಾಲಕಿ ಉತ್ಸವ, ಬೆಳ್ಳಿ ರಥೋತ್ಸವ, ಮುತ್ತಿನಪಾಲಕಿ ಉತ್ಸವ, ರುದ್ರಾಕ್ಷಿ ಮಂಟಪೋತ್ಸವ, ಬೆಳ್ಳಿಪಾಲಕಿ ಉತ್ಸವ, ತೆಪ್ಪೋತ್ಸವ ಹಾಗೂ ಪಂಚಬ್ರಹ್ಮೋತ್ಸವಗಳು ನಡೆದವು. ಪ್ರತಿದಿನ ರಾತ್ರಿ ನಡೆದ ಈ ಉತ್ಸವಗಳಲ್ಲಿ ಲಕ್ಷಾಂತರ ಜನ ಭಕ್ತರು ಭಾಗವಹಿಸಿ ಕಣ್ತುಂಬಿಸಿಕೊಂಡರು.

ಜಾತ್ರೆಯ ಅಂಗವಾಗಿ ಪ್ರತಿದಿನ ಸಂಜೆ ಧಾರ್ಮಿಕ ಉಪನ್ಯಾಸ ಮಾಲೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮವನ್ನು ಪೂಜ್ಯ ಶ್ರೀಗಳ ಸಾನ್ನಿಧ್ಯದಲ್ಲಿ ಏರ್ಪಡಿಸಲಾಗಿತ್ತು. ಫೆಬ್ರವರಿ ೨೩ ರಂದು ಪ್ರಾರಂಭವಾದ ಈ ಉಪನ್ಯಾಸ ಮಾಲೆ ಮಾರ್ಚ್ ೪ ರವರೆಗೆ ನಡೆಯಿತು. ಉಪನ್ಯಾಸವನ್ನು ಕ್ರಮವಾಗಿ ಶ್ರೀ ಕೋ.ರಂ. ಬಸವರಾಜು, ಡಾ. ಗೋವಿಂದರಾಯ,





ಬೆಳ್ಳಿಪಾಲಕಿ ಉತ್ಸವ

ಶ್ರೀ ಎಂ. ಸುರೇಶ್, ಪ್ರೊ. ಚೆನ್ನಪ್ಪ ಬಾರಿಗಿಡದ, ಶ್ರೀ ರಾಮರೆಡ್ಡಿ ವೆಂಕಟರೆಡ್ಡಿ, ಡಾ. ಬಿ. ನಂಜುಂಡಸ್ವಾಮಿ, ಶ್ರೀಮತಿ ಲೋಕೇಶ್ವರಿ ಪ್ರಭು, ಶ್ರೀ ಎಂ.ಜಿ. ಸಿದ್ಧರಾಮಯ್ಯ, ಪ್ರೊ. ಡಿ. ಚಂದ್ರಪ್ಪ, ಶ್ರೀ ಸಿದ್ಧಲಿಂಗಸ್ವಾಮಿ ಅವರು ನಡೆಸಿಕೊಟ್ಟರು.

ಇದೇ ಸಂದರ್ಭದಲ್ಲಿ 'ಗೋಸಲಶ್ರೀ' ಪ್ರಶಸ್ತಿಯನ್ನು ರಾಯರಪಾಳ್ಯದ ಶ್ರೀ ಬಸವರಾಜು ಅವರಿಗೆ, 'ಶಿವಕುಮಾರಸ್ವಾಮಿಜಿಶ್ರೀ' ಪ್ರಶಸ್ತಿಯನ್ನು ಬಂಡೆಪಾಳ್ಯದ ಶ್ರೀ ಅಡಿಕೆ ಹೊನ್ನಪ್ಪ ಅವರಿಗೆ, 'ಮರುಳಾರಾಧ್ಯಶ್ರೀ' ಪ್ರಶಸ್ತಿಯನ್ನು ಹಾಲನೂರಿನ ಶ್ರೀ ಹೆಚ್.ಟಿ. ಲಿಂಗಪ್ಪ ಅವರಿಗೆ, 'ಸಿದ್ಧಲಿಂಗೇಶ್ವರಶ್ರೀ' ಪ್ರಶಸ್ತಿಯನ್ನು ತುಮಕೂರಿನ ಶ್ರೀ ಕೆ.ಎಸ್. ಶಂಕರಯ್ಯ ಅವರಿಗೆ ಪ್ರದಾನ ಮಾಡಲಾಯಿತು.

ಪ್ರಶಸ್ತಿಗಳ ಪ್ರಾಯೋಜಕತ್ವವನ್ನು ಕ್ರಮವಾಗಿ ಮಧುಗಿರಿಯ ಎಂ.ಜಿ.ಎಂ. ಪ್ರೌಢಶಾಲೆಯ ನಿವೃತ್ತ ಮುಖ್ಯೋಪಾಧ್ಯಯರಾದ ಶ್ರೀ ರಾಜಶೇಖರಯ್ಯ, ಕಂಬದೂರು ದಿವಂಗತ ಶ್ರೀಮತಿ ಶಾಂತಮ್ಮ ಮಲ್ಲಶೆಟ್ಟಪ್ಪನವರ ಕುಟುಂಬದವರು, ತುಮಕೂರು ಶಿರಾ ಗೇಟ್ ಪ್ರಥಮ ದರ್ಜೆ ವಿದ್ಯುತ್ ಗುತ್ತಿಗೆದಾರರಾದ ಶ್ರೀ ಸುಂದರೇಶ್ ಹಾಗೂ ಕಾಗ್ಗೆರೆಯ ಶ್ರೀ ಕೆ. ಮಹಾದೇವಯ್ಯ ಅವರು ವಹಿಸಿಕೊಂಡಿದ್ದರು. ಉಪನ್ಯಾಸ ಮಾಲೆಯ ಸೇವೆಯನ್ನು ಕ್ಯಾತಸಂದ್ರದ ಶ್ರೀಮತಿ ರೇಣುಕಾ ಪರಮೇಶ್ ಅವರು ವಹಿಸಿಕೊಂಡಿದ್ದರು.

ಪ್ರತಿದಿನ ಧಾರ್ಮಿಕ ಉಪನ್ಯಾಸದ ನಂತರ ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಕ್ರಮವಾಗಿ ಬೆಂಗಳೂರಿನ ಸ್ವರಾಮೃತ ಕವಿಗಾನದ ಮಂಜುನಾಥ್ ಅವರಿಂದ ಸುಗಮ ಸಂಗೀತ, ಭೂಮಿತಾಯಿ ಬಳಗದ ಶ್ರೀ ಅರುಣ್‌ಕುಮಾರ್ ಮತ್ತು ತಂಡದವರಿಂದ 'ಸುಗಮ ಸಂಗೀತ', ಬೆಂಗಳೂರಿನ ಸವಿತಾ ಗಣೇಶ್ ಅವರಿಂದ 'ಹಳ್ಳಿ ಬ್ಯಾಂಡ್', ತುಮಕೂರಿನ ಸ್ಟೈಲ್ ಡ್ಯಾನ್ಸ್ ಅಕಾಡೆಮಿಯವರಿಂದ ನೃತ್ಯ ವೈಭವ, ನೀಲಾಲಯ ನೃತ್ಯ ಕೇಂದ್ರ, ಬಾಲವಿಶ್ವನಾಥ ಅವರಿಂದ ಭರತನಾಟ್ಯ, ಕಡಬಗೆರೆಯ ಶ್ರೀ ಮುನಿರಾಜು ಮತ್ತು ತಂಡದವರಿಂದ 'ಮೂಲ ಜನಪದ ಗಾಯನ', ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ನಾದಸ್ವರ ವಿದ್ವಾನ್ ಶ್ರೀ ರಾಮುಲು ಅವರಿಂದ 'ನಾದಸ್ವರ ವಾದನ', ಶ್ರೀ ಶಂಕರ್, ಭಾರತೀಪುರ ಮತ್ತು ತಂಡದವರಿಂದ 'ಜಾನಪದ ಝೇಂಕಾರ', ಶ್ರೀ ಗುರುರಾಜು ಹೊಸಕೋಟೆ ಮತ್ತು ತಂಡದವರಿಂದ 'ಜಾನಪದ ಶೈಲಿಯ ಗೀತೆಗಳು',






ಶ್ರೀ ಅಡಿಕೆ ಹೊನ್ನಪ್ಪನವರಿಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು 'ಶಿವಕುಮಾರ ಸ್ವಾಮೀಜಿಶ್ರೀ' ಪ್ರಶಸ್ತಿ ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಶ್ರೀ ಅಡಿಕೆ ಹೊನ್ನಪ್ಪನವರ ಕುಟುಂಬದವರು ಉಪಸ್ಥಿತರಿದ್ದರು.

ಅಂತರಾಷ್ಟ್ರೀಯ ಖ್ಯಾತಿಯ ಕುದ್ರೋಳಿ ಶ್ರೀ ಗಣೇಶ್ ಅವರಿಂದ 'ಜಾದೂ ಕಾರ್ಯಕ್ರಮ', ತುಮಕೂರಿನ ವಿದ್ವಾನ್ ಸಾಗರ್ ಮತ್ತು ತಂಡದವರಿಂದ 'ಶಿವತಾಂಡವ', ಶ್ರೀ ಸಿದ್ಧಗಂಗಾ ಮಠದ ವಿದ್ವಾನ್ ಶಿವಕುಮಾರ ಮತ್ತು ತಂಡದವರಿಂದ 'ವಚನ ಗಾಯನ' ಹಾಗೂ ತುಮಕೂರಿನ ಶ್ರೀ ಲೋಕೇಶ್ವರ ಮತ್ತು ತಂಡದವರಿಂದ 'ವೀಣಾವಾದನ' ಕಾರ್ಯಕ್ರಮಗಳು ನಡೆದವು.

ಉಪನ್ಯಾಸ ಮಾಲೆಯ ಪ್ರಾರಂಭದ ದಿನ ಶ್ರೀ ಚ. ವೇದಮೂರ್ತಿ ಸಂಯೋಜಿಸಿದ 'ಶರಣ ಸೌರಭ' ಕೃತಿಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿ ಶ್ರೀ ಚ. ವೇದಮೂರ್ತಿ ಅವರನ್ನು ಸನ್ಮಾನಿಸಿ ಆಶೀರ್ವದಿಸಿದರು.

ಈ ಜಾತ್ರೆಯ ಮತ್ತೊಂದು ವಿಶೇಷವೆಂದರೆ ರಾಸುಗಳ ಕೊಡುಕೊಳ್ಳುವಿಕೆ. ಈ ವರ್ಷ ೮೦೦೦ಕ್ಕೂ ಹೆಚ್ಚು ರಾಸುಗಳು ಬಂದಿದ್ದವು. ವ್ಯಾಪಾರ ವಹಿವಾಟು





ಚೆನ್ನಾಗಿಯೇ ನಡೆಯಿತು. ಜಾತ್ರೆಯಲ್ಲಿ ಒಂದು ಲಕ್ಷದಿಂದ ೧೫ ಲಕ್ಷದವರೆಗೂ ಬೆಲೆಯುಳ್ಳ ಎತ್ತುಗಳು ಎಲ್ಲರ ಗಮನ ಸೆಳೆದವು. ತಜ್ಞರ ಸಮಿತಿ ಆಯ್ಕೆ ಮಾಡಿದ ರಾಸುಗಳಿಗೆ ಪೂಜ್ಯರ ಸಮ್ಮುಖದಲ್ಲಿ ಬಹುಮಾನಗಳನ್ನು ನೀಡಿ ರೈತರನ್ನು ಪ್ರೋತ್ಸಾಹಿಸಲಾಯಿತು.







ವರದಿ

# ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅವತರಿಸಿದ ಪುಣ್ಯಭೂಮಿ ವೀರಾಪುರದಲ್ಲಿ ಪೂಜ್ಯರ ಪುತ್ಥಳಿ ನಿರ್ಮಾಣಕ್ಕೆ ಚಾಲನೆ

ಫೆಬ್ರವರಿ ೧೫ ರಂದು ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು ವೀರಾಪುರದಲ್ಲಿ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೧ ಅಡಿ ಪುತ್ಥಳಿ ನಿರ್ಮಾಣದ ತಳಪಾಯ ಕಾಮಗಾರಿಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಚಾಲನೆ ನೀಡಿ 'ಪೂಜ್ಯ ಗುರುವರ್ಯರಾದ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರ ಹುಟ್ಟೂರಿನಲ್ಲಿಯೇ ಪುತ್ಥಳಿ ನಿರ್ಮಾಣವಾಗುತ್ತಿರುವುದು ಗ್ರಾಮದ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗಲಿದೆ. ಇದರಿಂದ ಸ್ಥಳೀಯರಿಗೆ ಅನುಕೂಲವಾಗುತ್ತದೆ. ಪ್ರವಾಸಿಗರಿಗೆ ಅನುಕೂಲ ಹಾಗೂ ಕಲೆಗಳಿಗೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ಉದ್ದೇಶಿತ ಬೃಹತ್ ಕಾಮಗಾರಿ ನಡೆಯುತ್ತಿದೆ. ಸರ್ಕಾರದ ಈ ಕಾರ್ಯದಿಂದ ಸಂತೋಷವಾಗಿದೆ" ಎಂದು ತಿಳಿಸಿದರು.





ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಕರ್ನಾಟಕ ಸರ್ಕಾರದ ಲೋಕೋಪಯೋಗಿ ಸಚಿವರಾದ ಶ್ರೀ ಸಿ.ಸಿ. ಪಾಟೀಲ್ ಅವರು ಮಾತನಾಡಿ 'ಶ್ರೀ ಬಿ.ಎಸ್. ಯಡಿಯೂರಪ್ಪ ಅವರು ಮುಖ್ಯಮಂತ್ರಿಯಾಗಿದ್ದಾಗ ಪುತ್ಥಳಿ ನಿರ್ಮಾಣ ಹಾಗೂ ವೀರಾಪುರದ ಸಮಗ್ರ ಅಭಿವೃದ್ಧಿಗೆ ಬಜೆಟ್‌ನಲ್ಲಿ ಅನುದಾನ ನೀಡಿದ್ದರು. ಈಗ ಕಾಮಗಾರಿ ಆರಂಭವಾಗುತ್ತಿದೆ. ಈ ಯೋಜನೆ ಪೂರ್ಣಗೊಂಡ ನಂತರ ಈ ಸ್ಥಳ ಸುಂದರ ಧಾರ್ಮಿಕ ಪ್ರವಾಸಿ ತಾಣವಾಗಲಿದೆ" ಎಂದು ಹೇಳಿದರು.

ಈ ಸಂದರ್ಭದಲ್ಲಿ ಮಾತನಾಡಿದ ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರೂ ಹಾಗೂ ಈ ಯೋಜನೆಯ ಉಸ್ತುವಾರಿ ವಹಿಸಿಕೊಂಡಿರುವ ಶ್ರೀ ಎಂ. ರುದ್ರೇಶ್ ಅವರು ಮಾತನಾಡಿ "ಮುಂದಿನ ದಿನಗಳಲ್ಲಿ ವೀರಾಪುರ ಗ್ರಾಮ ವಿಶ್ವ ಮಟ್ಟದಲ್ಲಿ ಪ್ರಸಿದ್ಧಿ ಹೊಂದಲಿದ್ದು, ಪಾರಂಪರಿಕ ಪ್ರವಾಸಿ ತಾಣವಾಗಲಿದೆ. ಇದಕ್ಕೆ ಸರ್ಕಾರ ಹೆಚ್ಚು ಒತ್ತು ನೀಡಿದೆ. ಎಂದು ಹೇಳಿದರು.

ಸಮಾರಂಭದಲ್ಲಿ ಭಾಗಿಯಾಗಿದ್ದ ಜಿಜೆಪಿ ರಾಜ್ಯದ ಉಪಾಧ್ಯಕ್ಷರಾದ ಶ್ರೀ ಬಿ.ವೈ. ವಿಜಯೇಂದ್ರ ಅವರು ಮಾತನಾಡಿ 'ನಮ್ಮ ತಂದೆಯವರಾದ ಶ್ರೀ ಬಿಎಸ್. ಯಡಿಯೂರಪ್ಪನವರ ಕನಸು ಸಾಕಾರಗೊಳ್ಳುತ್ತಿರುವುದಕ್ಕೆ' ಹರ್ಷ ವ್ಯಕ್ತಪಡಿಸಿದರು.







ನೆನಪಿನಂಗಳದಿಂದ

# ಸಿದ್ಧಗಂಗೆಯ ಮಹಾಜಂಗಮಲೀಲೆ

– ಕೋ.ರಂ. ಬಸವರಾಜು *

ಒಂದು ಸಾರಿ ಚಿತ್ರದುರ್ಗದ ಜಗದ್ಗುರುಗಳಾದ ಜಯವಿಭವ ಮಹಾಸ್ವಾಮಿಗಳು ತೀವ್ರವಾದ ಕಾಯಿಲೆಯಿಂದ ಹಾಸಿಗೆ ಹಿಡಿದು ಬೆಂಗಳೂರಿನ ಸರ್ಪಭೂಷಣ ಮಠದಲ್ಲಿದ್ದರು. ಈ ವಿಷಯವನ್ನು ತಿಳಿದು ನಮ್ಮ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅವರ ಯೋಗಕ್ಷೇಮವನ್ನು ವಿಚಾರಿಸಲು ಸರ್ಪಭೂಷಣಮಠಕ್ಕೆ ದಯಮಾಡಿಸುವರು. ಆ ಸಮಯದಲ್ಲಿ ಜಗದ್ಗುರುಗಳು ಹಾಸಿಗೆಯಲ್ಲಿ ಪವಡಿಸಿರುತ್ತಾರೆ. ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜಗದ್ಗುರುಗಳ ಪಾದದ ಬಳಿ ನಿಂತೇ ಯೋಗಕ್ಷೇಮವನ್ನು ವಿಚಾರಿಸಲು ಆರಂಭಿಸುತ್ತಾರೆ. ಆಗ ಜಗದ್ಗುರುಗಳು ತಮ್ಮ ತಲೆ ಕಡೆ ಹಾಕಿದ್ದ ಕುರ್ಚಿಯನ್ನು ತೋರಿಸಿ **'ನೀವು ದೊಡ್ಡವರಪ್ಪ! ಬನ್ನಿ ಇಲ್ಲಿ ಮುಹೂರ್ತ ಮಾಡಿ'** ಎನ್ನುತ್ತಾರೆ. ಆದರೂ ಶ್ರೀ ಶಿವಕುಮಾರಸ್ವಾಮಿಗಳು ಅಲ್ಲೇ ನಿಂತೇ ಸಾಂತ್ವನ ಹೇಳುತ್ತಿರುತ್ತಾರೆ. ಆಗ ಜಗದ್ಗುರುಗಳೇ ಅಗಾಧವಾದ ನೋವಿನಲ್ಲಿಯೂ ಗರಕ್ಕನೆ ಎದ್ದು ಶ್ರೀ ಶಿವಕುಮಾರಸ್ವಾಮಿಗಳು ನಿಂತಿದ್ದ ಕಡೆಗೆ ತಲೆಹಾಕಿ ಪವಡಿಸುತ್ತಾರೆ. ಈ ಜಂಗಮ ಶಿಷ್ಟಾಚಾರದಿಂದ ಈರ್ವರ ಕಣ್ಣುಗಳಲ್ಲಿಯೂ ಹನಿ ತುಂಬಿ ತುಳುಕುತ್ತದೆ.

ಮೈಸೂರಿನ **ಅರಮನೆ ಪಂಚಗವಿಮಠದ ಶ್ರೀ ಶ್ರೀ ಗೌರೀಶಂಕರ ಮಹಾಸ್ವಾಮಿಗಳು** ಜಗತ್‌ಪ್ರಸಿದ್ಧ ದಾರ್ಶನಿಕರು. ಕಾಶಿಯಲ್ಲಿ ಮೂವತ್ತುಮೂರು ವರ್ಷಗಳ ಕಾಲ ತರ್ಕ, ವ್ಯಾಕರಣ ವೇದಾಂತಾದಿ ಹತ್ತಾರು ಶಾಸ್ತ್ರಗಳನ್ನು ಅಧ್ಯಯನ ಮಾಡಿ ಅಪಾರವಾದ ಪಾಂಡಿತ್ಯ ಗಳಿಸಿದ ಮಹಾನುಭಾವರು. ಕನ್ನಡ, ಇಂಗ್ಲಿಷ್, ಸಂಸ್ಕೃತ, ಹಿಂದಿ ಮುಂತಾದ ಅನೇಕ ಭಾರತೀಯ ಭಾಷೆಗಳಲ್ಲಿ ಪ್ರಬುದ್ಧವುಳ್ಳವರಾಗಿದ್ದರು. ಅದ್ಭುತವಾದ ವಾಕ್ ಪ್ರಬುದ್ಧತೆ, ಅನನ್ಯವಾದ ಅನುಭಾವ ಅವರದು. ಅವರೊಡನೆ ಶಾಸ್ತ್ರಾರ್ಥ ವಾಕ್ಯಾರ್ಥ ಮಾಡಲು ಕಾಶೀಪಂಡಿತರುಗಳೇ ಹಿಂದೆ ಸರಿಯುತ್ತಿದ್ದರು. ಇಂಥ ಶ್ರೀ ಶ್ರೀ ಗೌರಿಶಂಕರ ಮಹಾಸ್ವಾಮಿಗಳು ನಮ್ಮ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ವೀರವೈರಾಗ್ಯ ಮಹಾ ದಾಸೋಹಂಭಾವ ಹಾಗೂ ಲಿಂಗತಪಸ್ಸಿಗೆ ಮಾರುಹೋಗಿ ಇವರ ಮೇಲೆ ಅಪಾರವಾದ ಗೌರವನ್ನಿಟ್ಟುಕೊಂಡಿದ್ದರು. ಇಂಥ ಶ್ರೀ ಶ್ರೀ ಗೌರೀಶಂಕರ ಮಹಾಸ್ವಾಮಿಗಳು ಒಮ್ಮೆ ನಮ್ಮ ಶ್ರೀ ಶ್ರೀ ಶಿವಕುಮಾರ ಶ್ರೀಗಳನ್ನು ಬಿನ್ನಹ ಮಾಡಿ ತಮ್ಮ ಮಠಕ್ಕೆ ಕರೆಸಿಕೊಂಡಿದ್ದಾರೆ. ಅರ್ಚನಾ ಅರ್ಪಣ ಅನುಭಾವಗಳಾದ ಮೇಲೆ ೧೫ ತೊಲ ಬಂಗಾರದ ಕರಡಿಗೆಯನ್ನು ಜಂಗಮದ ಕಾಣಿಕೆಯಾಗಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಶ್ರೀ ಶ್ರೀ ಗೌರಿಶಂಕರ ಸ್ವಾಮಿಗಳು ಅರ್ಪಿಸುತ್ತಾರೆ. ಆಗ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು **"ಬುದ್ಧೀ! ನನಗೆ ಬೇಡ ಬುದ್ಧಿ! ನಾನು ಇದನ್ನು ಧರಿಸುವುದಿಲ್ಲ. ನನಗೇಕೆ?"** ಎಂದು ವಿನಯದಿಂದ ತಿರಸ್ಕರಿಸುತ್ತಾರೆ. ಆದರೆ ಗೌರೀಶಂಕರ ಮಹಾಸ್ವಾಮಿಗಳು ಬಿಡಬೇಕಲ್ಲ. **"ಸ್ವಾಮೀ! ತಾವು ಮಹಾಜಂಗಮಮೂರ್ತಿಗಳು, ನಾವೀಗ ನಿಮ್ಮನ್ನು ಭಕ್ತನಾಗಿ ನಮ್ಮ ಮಠಕ್ಕೆ ಕರೆಸಿಕೊಂಡು ಪ್ರಸಾದ ಸ್ವೀಕಾರ ಮಾಡಿದ್ದೇನೆ. ಭಕ್ತನಾದವನು ಜಂಗಮ ಪಾದಕ್ಕೆ ಧನವನ್ನರ್ಪಿಸಬೇಕೆಂದು ಸಮಯ ಧರ್ಮ. ಆದ್ದರಿಂದ ಭಕ್ತನ ಭಕ್ತಿಗೆ ಚ್ಯುತಿ ಬಾರದಂತೆ ಸ್ವೀಕರಿಸಿ ಧರಿಸುವುದರ ಮೂಲಕ ಈ ಭಕ್ತನ ಭಕ್ತಿಯನ್ನು ಶುದ್ಧಗೊಳಿಸಬೇಕು"** ಎನ್ನುವರು. ಆಗ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನಿರುಪಾಯರಾಗಿ ಸ್ವೀಕರಿಸುವರು.

ಒಮ್ಮೆ ಅದೇ ಶ್ರೀ ಶ್ರೀ ಗೌರೀಶಂಕರ ಮಹಾಸ್ವಾಮಿಗಳು ಸುತ್ತೂರು ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳೊಡನೆ ಬೆಂಗಳೂರಿನ ಬನಶಂಕರಿ ದೇವಾಲಯದಲ್ಲಿ ಬಿಡಾರ ಹೂಡಿದ್ದರು. ಒಂದು ದಿನ ರಾತ್ರಿ ಪೂಜಾಪ್ರಸಾದದ ನಂತರ ಪವಡಿಸಲು ಸಿದ್ಧರಾಗುತ್ತಿದ್ದರು. ಸುಮಾರು ಹತ್ತು ಘಂಟೆ ಸಮಯ. ನೆನೆದಾಗ ಅವರನ್ನು ನೋಡ ಬೇಕೆಂಬ ಬಯಕೆಯುಳ್ಳ ನಮ್ಮ ಶ್ರೀ ಸಿದ್ಧಗಂಗಾ ಶ್ರೀಗಳು ದರ್ಶನಕ್ಕಾಗಿ ಬಂದರು. ಆಗ ಚಿಕ್ಕವರಾದರೂ ಕೂಡ ಅವರನ್ನು ಮಹಾಜಂಗಮ ಭಾವನೆಯಿಂದ ತಮ್ಮ ಹಾಸಿಗೆಯ ಮೇಲೆ ಬಲವಂತದಿಂದ ಪಕ್ಕದಲ್ಲಿ ಕುಳ್ಳಿರಿಸಿಕೊಂಡು **'ತಮ್ಮ ಲಿಂಗತಪಸ್ಸು ಹೇಗಿದೆ? ದಾಸೋಹ ಹೇಗೆ ನಡೆಯುತ್ತಿದೆ?'** ಮುಂತಾಗಿ ವಿಚಾರಿಸಿದರು. ಶ್ರೀ ಶಿವಕುಮಾರ ಮಹಾಸ್ವಾಮಿಗಳೂ

---

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.





ಕೂಡ ಅವರ ಯೋಗಕ್ಷೇಮವನ್ನು ವಿಚಾರಿಸಿದರು. ಹೀಗೆ ಉಭಯಕುಶಲೋಪರಿ ನಂತರ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನಮಸ್ಕಾರ ಮಾಡಿ ಹೊರಟು ನಿಂತರು. ಆಗ ಶ್ರೀ ಶ್ರೀ ಗೌರೀಶಂಕರ ಸ್ವಾಮಿಗಳು ಬಾಗಿಲವರೆವಿಗೂ ಬಂದು ಬೀಳ್ಕೊಟ್ಟರು. ಅಷ್ಟರಲ್ಲಿ ಅತ್ತ ಅವರ ಸೇವೆ ಮಾಡುತ್ತಿದ್ದ ಶಿಷ್ಯರು ಹಾಸಿಗೆ ಮೇಲಿನ ಹೊದಿಕೆ ಧೂಳಾಗಿದೆ ಎಂಬ ಭಾವನೆಯಿಂದ ಕೊಡವಲು ಅನುವಾದರು. ಅಷ್ಟರೊಳಗೆ ಶ್ರೀ ಶ್ರೀ ಗೌರಿಶಂಕರ ಸ್ವಾಮಿಗಳು ಆತುರದಿಂದ ಒಳಗಡೆ ಬಂದು ಶಿಷ್ಯ ಪರಿಚಾರಕರನ್ನು ತಡೆದು **'ನಿಲ್ಲು ನಿಲ್ಲು ಎಂಥ ಕೆಲಸ ಮಾಡುತ್ತಿದ್ದೆ ನನ್ನ ಶ್ರಮವನ್ನೆಲ್ಲಾ ವ್ಯರ್ಥ ಮಾಡುತ್ತಿದ್ದೆ'** ಎಂದುಬಿಟ್ಟರು. ಆ ಮಾತು ಅಲ್ಲಿದ್ದವರಿಗೆ ಯಾರಿಗೂ ಅರ್ಥವಾಗಲಿಲ್ಲ. ಆಶ್ಚರ್ಯಪಟ್ಟರು. ಆಗ ಶ್ರೀ ಶ್ರೀ ಗೌರಿಶಂಕರ ಸ್ವಾಮಿಗಳೇ ಸಮಾಧಾನವಾಗಿ ಹೇಳಿದರು. **'ನೋಡಿರಿ ಆ ಸಿದ್ಧಗಂಗೆಯ ಆ ಮಹಾಜಂಗಮದ ಪಾದಧೂಳಿನ ಮೇಲೆ ಮಲಗಿ ನನ್ನೀ ದೇಹವನ್ನು ಪವಿತ್ರ ಮಾಡಿಕೊಳ್ಳಬೇಕೆಂದು ಅವರನ್ನು ಬಲವಂತವಾಗಿ ಹಾಸಿಗೆ ಮೇಲೆ ಕೂರಿಸಿಕೊಂಡಿದ್ದೆ. ಆ ಭಾಗ್ಯ ವ್ಯರ್ಥವಾಗುತ್ತಿತ್ತು"** ಎಂದರು. ಇದು ಆ ಜಂಗಮಮೇರು ಶ್ರೀ ಶಿವಕುಮಾರ ಮಹಾಸ್ವಾಮಿಗಳಿಗೆ ತೋರಿದ ಗೌರವ!!

ಒಮ್ಮೆ ಮಹಾಶಿವಯೋಗಿಗಳಾದ ಧಾರವಾಡ ಮುರುಘಾಮಠದ ಮೃತ್ಯುಂಜಯ ಅಪ್ಪಗಳು ಶಿಷ್ಯರೊಡಗೂಡಿ ಯಡಿಯೂರು ಶ್ರೀ ಸಿದ್ಧಲಿಂಗೇಶ್ವರನ ದರ್ಶನ ಮಾಡಿ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಶಿವಯೋಗಿಗಳ ದರ್ಶನಕ್ಕಾಗಿ ಶ್ರೀ ಸಿದ್ಧಗಂಗಾ ಮಠಕ್ಕೆ ದಯಮಾಡಿಸುತ್ತಾರೆ. ಆಗ ಪರಮಪೂಜ್ಯರು ಭಿಕ್ಷಾಟನೆಗಾಗಿ ಗ್ರಾಮಾಂತರಗಳಿಗೆ ತೆರಳಿ ಸಂಜೆ ಗ್ರಾಮವೊಂದರ ಭಕ್ತರ ಗೃಹದಲ್ಲಿ ಶಿವಪೂಜಾನಂದದಲ್ಲಿ ಮಗ್ನರಾಗಿರುತ್ತಾರೆ. ಅಂಗೈಯೊಳಗಣ ಲಿಂಗಯ್ಯನನ್ನು ಧ್ಯಾನ ಮಾಡುತ್ತಿರುವಾಗ ಲಿಂಗಮಧ್ಯೇ ಜಂಗಮ ದರ್ಶನವಾಗುತ್ತದೆ. ಭಾವ್ಯಾರ್ಥಚಿಂತಕರಾದ ಪರಮಪೂಜ್ಯರು ಪೂಜೆಯನ್ನು ಪೂರೈಸಿ ಕೂಡಲೇ ಶ್ರೀಮಠಕ್ಕೆ ಬರುತ್ತಾರೆ. ಬಂದವರು ಮಹಾಶಿವಯೋಗಿ ಮೃತ್ಯುಂಜಯಪ್ಪಗಳೆಂದು ಗೊತ್ತಾಗಿ ಅವರ ದರ್ಶನ ಮಾಡಿ ಕುಶಲೋಪರಿಯ ನಂತರ ಪವಡಿಸಲು ವ್ಯವಸ್ಥೆ ಮಾಡಿ ತಾವೂ ಪವಡಿಸುತ್ತಾರೆ. ಮುಂದಿನ ಬ್ರಾಹ್ಮೀ ಮುಹೂರ್ತದಲ್ಲೆದ್ದು ಪ್ರಾತರ್ವಿಧಿಯನ್ನು ನಿರ್ವರ್ತಿಸಿ ಮಹಾಜಂಗಮರಿಬ್ಬರೂ ಸಮರಸ ಭಾವದಿಂದ ಇಷ್ಟಲಿಂಗ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಕೊನೆಯ ಪಾದೋದಕ ಪ್ರಕ್ರಿಯೆಯ ಹಂತದಲ್ಲಿ ಪಾದಪೂಜೆಗಾಗಿ ಯಾರು ಗದ್ದುಗೆಯಲ್ಲಿ ಮೂರ್ತ ಮಾಡುವುದೆಂಬ ವಿಷಯದಲ್ಲಿ ಸ್ವಾರಸ್ಯಕರವಾದ ಚರ್ಚೆ ನಡೆಯುತ್ತದೆ. ಅದು ಕ್ರಿಯಾಮೂರ್ತಿಗಳಾದ ಮಹಾಜಂಗಮರೀರ್ವರ ನಡುವೆ ಜರುಗುವ ತಾತ್ವಿಕವಾದ ಚರ್ಚೆ, ಸಂಭಾಷಣೆಯನ್ನು ಕೇಳಿ–

**ಶ್ರೀ ಶಿವಕುಮಾರ ಶಿವಯೋಗಿಗಳು:** "ಅಪ್ಪಗಳೇ! ನೀವು ಮಹಾತಪಸ್ವಿಗಳು, ಹಿರಿಯರು. ತಾವೇ ಗದ್ದುಗೆಯ ಮೇಲೆ ಮೂರ್ತಮಾಡಿ ಪಾದಪೂಜೆ ಮಾಡಲು ಅವಕಾಶ ಮಾಡಿಕೊಟ್ಟು ಪಾದೋದಕವನ್ನು ಕರುಣಿಸಿ ಅನುಗ್ರಹಿಸಬೇಕು".

**ಮೃತ್ಯುಂಜಯ ಅಪ್ಪಗಳು :** "ಸ್ವಾಮಿ ತಾವು ಮಹಾನ್ ದಾಸೋಹಿಗಳು, ಸಾಧಕರು, ಜ್ಞಾನಿಗಳು. ತಾವು ಗದ್ದುಗೆಯ ಮೇಲೆ ಕೂರಬೇಕು. ನಮ್ಮನ್ನು ಅನುಗ್ರಹಿಸಬೇಕು."

**ಸಿದ್ಧಗಂಗೆ ಅಪ್ಪಗಳು :** "ಎಲ್ಲಾದರೂ ಉಂಟೆ ಸ್ವಾಮಿ, ನಿಮ್ಮ ಸಾಧನೆಯ ಮುಂದೆ ನನ್ನದು ಏತರ ಸಾಧನೆ? ತಾವೇ ಗದ್ದುಗೆಯ ಮೇಲೆ ಮೂರ್ತ ಮಾಡಬೇಕು."

**ಧಾರವಾಡದ ಅಪ್ಪಗಳು :** "ಇಲ್ಲ ಸ್ವಾಮಿ, ತಾವೇ......"

**ಸಿದ್ಧಗಂಗೆ ಅಪ್ಪಗಳು :** "ಆಗಲ್ಲ ಬುದ್ಧೀ ತಾವೇ......"

**ಧಾರವಾಡದ ಅಪ್ಪಗಳು :** "ಸ್ವಾಮಿ ನಾವು ಭಕ್ತರಾಗಿ ಅಷ್ಟು ದೂರದಿಂದ ಬಂದಿದ್ದೇವೆ. ತಮ್ಮ ದರ್ಶನ, ಸ್ಪರ್ಶನ, ಪಾದೋದಕ, ಪ್ರಸಾದಗಳನ್ನು ಪಡೆದು ಧನ್ಯರಾಗೋಣ ಎಂದು ಆಸೆಯಿಟ್ಟುಕೊಂಡು ಬಂದಿದ್ದೇವೆ. ಶಿವನಿಚ್ಛೆ! ನಮಗೆ ಲಭ್ಯವಾಗಲಿಲ್ಲ. ಬರುತ್ತೇವೆ" ಎಂದು ಶಿಷ್ಯರೊಡನೆ ಎದ್ದು ಹೊರಡಲು ಅನುವಾದರು. ಆಗ ನಮ್ಮ ಸಿದ್ಧಗಂಗೆಯ ಪರಮಪೂಜ್ಯರೇ ಗದ್ದುಗೆಯೇರಿ ಪಾದಪೂಜೆ ಮಾಡಿಸಿಕೊಂಡು ಪಾದೋದಕ ಪ್ರಸಾದವನ್ನು ಕರುಣಿಸಿದರು. ಆಗ ಧಾರವಾಡದ ಅಪ್ಪಗಳು, "ನಮ್ಮ ಜನ್ಮ ಸಾರ್ಥಕವಾಯಿತು, ಮಹಾಜಂಗಮದ ಕರುಣೆಯಿಂದ" ಎಂದು ಸಂತೋಷದಿಂದ ಹೊರಟರು. ಮಹಾಜಂಗಮಕ್ಕೇ ಅನುಗ್ರಹ ಮಾಡಿದ ಜಂಗಮ ದೇವರು ನಮ್ಮ ಪೂಜ್ಯರು.





**ಸಾಂದರ್ಭಿಕ**

# ಶ್ರೀ ಸಿದ್ಧಗಂಗಾ ಮಠದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಮಾನವೀಯ ಸೇವೆಯ ಮಹಾಶೃಂಗ

– ಡಾ. ಎಂ.ಜಿ. ನಾಗರಾಜ್ *

ಅನಂತದಲ್ಲಿ ಅಂತ್ಯವಾದ, ಅಂತ್ಯದಲ್ಲಿ ಅನಂತವಾದ ಬಾಳುವೆ ಮನುಜನದ ನೂರು ವರ್ಷದ ಹಾಗೂ ಮೀರಿದ ಆಯುಷ್ಯವೆಂದರೂ ಅನಂತರ ಒಂದು ಭಾಗವದಾಗಿದೆ. ಈ ಆಯುಷ್ಯ ಅನಂತವಾಗುವುದು, ಬಾಳಿದ ಬದುಕಿನಲ್ಲಿ ಮಾಡಿದ ಮಾನವೀಯ ಸೇವೆ, ಸಾಧನೆ, ಪರಿಶ್ರಮ, ಚಿಂತನಾ ನವ್ಯತೆ, ದೈವಿಕಭಾವ ಕಜ್ಜುಗ, ಪರಹಿತ ಕಾಯಕ್ಕೆ ಸತ್‌ಪ್ರೇರಣಾ ಪ್ರಭಾವ ಇತ್ಯಾದಿಗಳಿಂದ ಜನಮಾನಸದಲ್ಲಿ ನಿರಂತರ ಸ್ಮರಣ ಸಾಕ್ಷಿಯಾಗುವಲ್ಲಿ ಕಾಣಬರುವಂತಹದು. ಹೀಗೆ ೧೧೧ ವರ್ಷಗಳ ಆಯುರ್ಮಾನದಲ್ಲಿ ಸಾರ್ಥಕ ಬಾಳು ನಡೆಸಿ, ಸೇವಾಸೌರಭದಿಂದ ಅನೇಕವಾದವರು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು.

ಪೂಜ್ಯರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ವೀರಾಪುರದಲ್ಲಿ ೦೧-೦೪-೧೯೦೮ ರಂದು ಪಟೇಲ್ ಹೊನ್ನೇಗೌಡರ ಧರ್ಮಪತ್ನಿ ಶ್ರೀಮತಿ ಗಂಗಮ್ಮನವರ ಪುಣ್ಯಗರ್ಭದಲ್ಲಿ ಜನಿಸಿದ ಅಮೃತ ಶುಭ ಪಲ್ಲವ. ಹೀಗೆ ಜನಿಸಿದ ಪುಣ್ಯಜೀವಿ ೨೧-೦೧-೨೦೧೯ ರವರೆಗೆ ಸಾರ್ಥಕ ಕಾಯಕ ಸೇವೆಯನ್ನು ಕ್ರಿಯಾಶೀಲವಾಗಿ ಸಲ್ಲಿಸಿ ಅಂತ್ಯದ ಅನಂತ ಜೀವವಾದರು.

ಬದುಕಿನ ಸಕ್ರಿಯಶೀಲತೆಯಲ್ಲಿ ಬಾಲ್ಯ, ಪ್ರೌಢ, ವಾರ್ಧಕ್ಯವನ್ನು ಮಾಡಿ ತಮ್ಮ ಕಾಲದ ಎಲ್ಲಾ ಕ್ಷೇತ್ರಗಳಿಂದ ಸಂಪರ್ಕಕ್ಕೆ ಬಂದ ವ್ಯಕ್ತಿಗಳಲ್ಲಿ ವ್ಯಕ್ತಿತ್ವ ಶೋಭೆಯನ್ನು ಅರಳಿಸಿದರು. ತಮ್ಮ ನಡೆ-ನುಡಿಯ ಮಾದರಿಗಳಿಂದ ಅವರದು ದಯಾರ್ದ ಹೃದಯ. ಅಂತಾಗಿ ಬಡವರಿರಲಿ, ಅನಕ್ಷರಸ್ಥರಿರಲಿ, ಅನಾಶ್ರಿತರಿರಲಿ, ಅನಾಥರಿರಲಿ, ಕುರುಡರಿರಲಿ, ಜೀವನಾಧಾರ ವಿಲ್ಲದವರಿರಲಿ, ಅಸಹಾಯಕರಿರಲಿ ಅಂತಹವರೆಲ್ಲಾ ಅವರೆಡೆಗೆ ಬಂದಾಗ ಮೈದಡವಿ ತಮ್ಮ ಸಿದ್ಧಗಂಗಾ ಮಠದಲ್ಲಿ ಬಾವಣಿಸಿ ಆತ್ಮವಿಶ್ವಾಸ ತುಂಬಿದರು. ಕ್ರಿ.ಶ. ೧೧೬೨ ರಲ್ಲಿ ಬಳ್ಳಿಗಾವೆಯ ಕೋಡಿಮಠದ ವಾಮಶಕ್ತಮುನಿಯ ನೆನಪು ತಂದರೂ ಅದನ್ನು ಮೀರಿ ವರ್ತಮಾನದ ಬಾಳ್ವೆಗೂ ಆಶ್ರಿತರಿಗೆಲ್ಲಾ ನೇರ್ಪುಗೊಳಿಸಿದರು.

ಅನೇಕ ವೈವಿಧ್ಯಮಯ ಶಿಕ್ಷಣ ಸಂಸ್ಥೆಗಳನ್ನು, ವಸತಿ ನಿಲಯಗಳನ್ನು, ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ತೆರೆದು ಅಶನ, ಅಕ್ಷರ, ಆಶ್ರಯದ ದಾಸೋಹತ್ರಯವನ್ನು ಚಾಲ್ತಿ ನಿರಂತರಗೊಳಿಸಿದರು.

ಸಿದ್ಧಗಂಗಾ ಮಠದ ಈ ಪ್ರತಿಷ್ಠಾನವು ೧೪ನೇ ಶತಮಾನದಲ್ಲಿ ಹರದನಹಳ್ಳಿಯಿಂದ ಆಗಮಿಸಿದ ಶ್ರೀ ಗೋಸಲ ಸಿದ್ಧೇಶ್ವರರಿಂದ ಸ್ಥಾಪಿತವಾಯಿತು. ಇದಕ್ಕೆ ಸಿದ್ಧಗಂಗಾ ತೀರ್ಥೋದ್ಭವ ಗವಿಯ ಮೇಲೆ ಬಂಡೆಯ ಹೊರಭಿತ್ತಿಯಲ್ಲಿ ಹಾಗೂ ನೆರೆಯ ರಾಮೇಶ್ವರ ಬೆಟ್ಟದ ಗವಿಯಲ್ಲಿ ಕಂಡುಬಂದ ಶಾಸನಗಳೇ ಸಾಕ್ಷಿಯಾಗಿದೆ. ತದನಂತರ ೧೬ನೇ ಶತಮಾನದಲ್ಲಿ ಶ್ರೀ ತೋಂಟದ ಗವಿಸಿದ್ಧಲಿಂಗ ಯತಿಗಳಿಂದ ಸಿದ್ಧಗಂಗಾ ಕ್ಷೇತ್ರವು ಮಹತ್ವಪೂರ್ಣವಾಗಿ ಅಭಿವೃದ್ಧಿಗೊಂಡು ಪ್ರಸಿದ್ಧಿಗೊಳಿಸಿತು. ಇದಲ್ಲದೆ ೧೨ನೇ ಶತಮಾನದ ಮುಂಚೆ ನಾಥಪಂಥ ಸಿದ್ಧರ ಪ್ರಭಾವಕ್ಕೂ ಒಳಗಾಗಿದ್ದರೂ ೧೨ನೇ ಶತಮಾನದಲ್ಲಿ ಮೇದಾರ ಕೇತಯ್ಯ, ಸಿದ್ಧರಾಮ ಶಿವಯೋಗಿ, ಮಡಿವಾಳ ಮಾಚಯ್ಯ ಮುಂತಾದ ಶರಣರ ತಪೋನುಷ್ಠಾನ ಕ್ಷೇತ್ರವಾಗಿ ಸಿದ್ಧಗಂಗಾ ಕ್ಷೇತ್ರವು ಪ್ರಸಿದ್ಧಿ ಪಡೆಯಿತು. ಇದಕ್ಕೆ ಸನಿಹದ ಬೆಳಗೊಂಬದ ಸಿದ್ಧರಾಮೇಶ್ವರಗಿರಿ, ಮೈದಾಳ, ಕ್ಯಾತಸಂದ್ರ (ಮೇದಾರ ಕೇತಯ್ಯನ ನೆಲೆ) ಸ್ಥಳಗಳೇ ಪೋಷಕ ಪುರಾವೆಗಳಂತೆ ಭಕ್ತರ ಆರಾಧ್ಯ ನೆಲೆಗಳಾಗಿ ಕಾಣಬರುತ್ತವೆ. ಇಂತಹ ಐತಿಹಾಸಿಕ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರತಿಷ್ಠಾನ ಪಲ್ಲವಗೊಂಡ ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರಾಗಿ ಶ್ರೀ ಉದ್ಧಾನ ಶ್ರೀಗಳಿಂದ ೩-೩-೧೯೩೦ ರಲ್ಲಿ ನಿರಂಜನ ಜಂಗಮ ಚಿಹ್ನೆ ಶೋಭಿತ ವಿರಕ್ತಾಶ್ರಮ ದೀಕ್ಷೆಯನ್ನು ಪಡೆದಿದ್ದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ೧೧-೧-೧೯೪೧ ರಂದು ಶ್ರೀಮಠದ ಅಧಿಕಾರವನ್ನು ವಹಿಸಿಕೊಂಡರು. ಪರಂಪರೆಯ ಆಧಾರ, ಆಧುನಿಕ ಅಗತ್ಯ, ವರ್ತಮಾನದ ಮಾರ್ಪಾಟುಗಳು ಇವನ್ನೆಲ್ಲಾ ಗಮನಿಸಿ ಶ್ರೀಮಠವನ್ನು ಜ್ಞಾನ ವಿಜ್ಞಾನಗಳ ಮಹಾಕೇಂದ್ರವಾಗಿ ರೂಪಿಸಿ ಅದರ ಸರ್ವಾಂಗೀಣ ಪ್ರಗತಿಗೆ ಪರಿಶ್ರಮಿಸುತ್ತಾ ಬಂದರು. ಅಂತಾಗಿ ಅಧ್ಯಾತ್ಮ, ವಿಜ್ಞಾನ, ಆವಿಷ್ಕಾರಗಳ

* ೧೬೧೭, 'ಅನರ್ಘ್ಯ', ಶ್ರೀ ಜಚನಿ ಕೃಪ, ೨೨೧, ೬ನೇ ಕ್ರಾಸ್, ೫ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-೫೬೦ ೦೧೦







ನೆಲೆಯಾಗಿ ಶ್ರೀಮಠವು ದೈನಂದಿನ ಯಾತ್ರಾ ಸ್ಥಳವೆನಿಸಿತು. ದಾಸೋಹದ ಕಾರ್ಯ ತಾಣವಾಯಿತು. ಯಾತ್ರಿಗಳಿಗೆ ಪ್ರಸಾದದ ತೃಪ್ತಿಯಲ್ಲಿ ಮಾನಸಿಕ, ದೈಹಿಕ ಸಂತೋಷ ದಕ್ಕುತ್ತಿತ್ತು.

ಸುಮಾರು ೧೫೦ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರು. ಅವುಗಳಲ್ಲಿ ಎಂಜಿನಿಯರಿಂಗ್, ಫಾರ್ಮಸಿ ಶಿಕ್ಷಣ ಸಂಸ್ಥೆಗಳು, ಪ್ರಾಥಮಿಕ ಶಾಲೆಗಳಿಂದ ಹಿಡಿದು ಪದವಿ ಕಾಲೇಜು, ಸ್ನಾತಕೋತ್ತರ ಮಟ್ಟದ ಕಾಲೇಜು, ಅಂಧರ ಮಕ್ಕಳ ಪಾಠಶಾಲೆ, ಸಂಸ್ಕೃತ ಶಿಕ್ಷಣ ಸಂಸ್ಥೆ ಸಹಿತ ಕೂಡಿದ್ದು ಶೈಕ್ಷಣಿಕ ಸೌಲಭ್ಯವನ್ನೂ ಒದಗಿಸಿದರು. ಶಿಕ್ಷಣಾರ್ಥಿಗಳಿಗೆ ಆಶ್ರಯ (ವಸತಿ ಸೌಲಭ್ಯ) ಅಶಣಪೂರ್ಕೈಕೆ ಹಾಗೂ ಯೋಗಕ್ಷೇಮದತ್ತ ಗಮನ ನೀಡಿ ಸೌಲಭ್ಯ ಒದಗಿಸಿದರು. ಅಂತಾಗಿ ಇಂದಿಗೂ ಸುಮಾರು ೧೦ ಸಾವಿರಕ್ಕೂ ಮೀರಿ ವಸತಿಗೊಂಡಿರುವ ವಿದ್ಯಾರ್ಥಿ ವೃಂದಕ್ಕೆ ದಾಸೋಹವು ಶ್ರೀಮಠದಲ್ಲಿ ನಡೆಯುತ್ತಿರುವುದಕ್ಕೆ ಅವರ ಅಂದಿನ ಭವಿಷ್ಯದ ಚೇತನದ ಕುರುಹುವಾಗಿದೆ.

ಶ್ರೀಮಠದ ಮುಂದೆ ತೆರೆದ ವಿಶಾಲ ಅಂಗಳದಲ್ಲಿ ನಡೆಯುವ ನಿತ್ಯ ಪ್ರಾರ್ಥನಾ ವಿದ್ಯಾರ್ಥಿಗಳ ಸಮೂಹದ ಪ್ರಾರ್ಥನಾ ಶಿಸ್ತು ಹಾಗೂ ವೈಖರಿ ಶ್ರೀಗಳವರ ಸಮ್ಮುಖದಲ್ಲಿ ಆಧ್ಯಾತ್ಮಿಕ ಸ್ಫೂರ್ತಿಯ ಚೈತನ್ಯದ ಕುರುಹಾಗಿ ಕಾಣಬರುತ್ತಿತ್ತು. ಇದಲ್ಲದೆ ಶ್ರೀಗಳವರು ತರಗತಿಯಲ್ಲೂ ವಿದ್ಯಾರ್ಥಿಗಳಿಗೆ ಪಾಠ ಪ್ರವಚನ ನಡೆಸುತ್ತಿದ್ದರು. ಹಾಗೂ ಮಠದ ಪರಿಸರದಲ್ಲಿದ್ದ ಹಾಸ್ಟೆಲ್ಲುಗಳಲ್ಲಿದ್ದ ವಿದ್ಯಾರ್ಥಿಗಳಿಗೆ ಪಾಠ ಮಾಡಿ ಹಿಂದುಳಿದ ವಿದ್ಯಾರ್ಥಿಗಳಿಗೆ ತರಬೇತಿ ನೀಡುತ್ತಿದ್ದರು. ಈ ಹಾಸ್ಟೆಲುಗಳಲ್ಲಿ ಜಾತಿ, ಮತಭೇದ ವಿಲ್ಲದೆ ಕರ್ನಾಟಕ ಹಾಗೂ ಕರ್ನಾಟಕದಾಚೆಗಿನ ರಾಜ್ಯಗಳಿಂದ ಬಂದವರಿದ್ದರು. ಅವರುಗಳಿಗೆಲ್ಲಾ ಶ್ರೀಗಳವರಿಂದ ಒಳ್ಳೆಯ ನಡತೆ, ಶಿಸ್ತು, ಬಾಂಧವ್ಯಗಳ ಬಗ್ಗೆ ಹಿತನುಡಿಗಳಿರುತ್ತಿದ್ದವು.

ಕೃಷಿ ಕಾಯಕವಿರಲಿ, ಕಟ್ಟಡ ನಿರ್ಮಾಣವಿರಲಿ, ಹಾಸ್ಟೆಲುಗಳಿರಲಿ, ವಿದ್ಯಾರ್ಥಿಗಳ ವಸತಿಗಳಿರಲಿ, ಯಾತ್ರಿ ನಿವಾಸವಿರಲಿ, ಎಲ್ಲವುಗಳ ನಿರ್ಮಾಣ ವ್ಯವಸ್ಥಾ ಕಾತುರರಾಗಿ ನೇರ್ಪುಗೊಳಿಸುವ ಮಾದರಿ ಕ್ರಿಯಾಶೀಲತೆ ಅವರದಾಗಿತ್ತು.

ಪೂಜ್ಯ ಶ್ರೀಗಳವರಿಗೆ ಕರ್ನಾಟಕ ರಾಜ್ಯ ಸರ್ಕಾರದಿಂದ ೨೦೦೭ ರಲ್ಲಿ ಕರ್ನಾಟಕ ರತ್ನ ಪ್ರಶಸ್ತಿ, ೨೦೧೫ ರಲ್ಲಿ ಭಾರತ ಸರ್ಕಾರದಿಂದ ಪದ್ಮಭೂಷಣ ಪ್ರಶಸ್ತಿಗಳು ಅವರ ಸೇವಾ ಸಾಧನೆಗಾಗಿ ದತ್ತವಾದವು. ಗೌರವ ಡಾಕ್ಟರೇಟ್ ಪದವಿಯೂ ಅವರಿಗೆ ದತ್ತವಾಯಿತು.

ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಗಣ್ಯರು ಪೂಜ್ಯ ಸ್ವಾಮೀಜಿಯವರ ದರ್ಶನ ಹಾಗೂ ಆಶೀರ್ವಾದದ ಹಾರೈಕೆಗಾಗಿ ಹರಸಿ ಬರುತ್ತಿದ್ದರು. ಮೈಸೂರು ಮಹಾರಾಜರಾಗಿದ್ದ ಶ್ರೀ ಜಯಚಾಮ ರಾಜೇಂದ್ರ ಒಡೆಯರ್, ರಾಷ್ಟ್ರಪತಿಗಳಾದ ಶ್ರೀ ವಿ.ವಿ. ಗಿರಿ ಮತ್ತು ಶ್ರೀಮತಿ ಪ್ರತಿಭಾ ಪಾಟೀಲ್, ಶ್ರೀ ಅಬ್ದುಲ್ ಕಲಾಂ, ಪ್ರಧಾನಮಂತ್ರಿಗಳಾದ ಮಾನ್ಯರಾದ ಶ್ರೀ ಅಟಲ್ ಬಿಹಾರಿ ವಾಜಪೇಯಿ, ಶ್ರೀ ಮೊರಾರ್ಜಿ ದೇಸಾಯಿ, ಶ್ರೀಮತಿ ಇಂದಿರಾಗಾಂಧಿ, ಶ್ರೀ ಹೆಚ್.ಡಿ. ದೇವೇಗೌಡ, ಶ್ರೀ ನರೇಂದ್ರ ಮೋದಿ, ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಬಿ.ಎಸ್. ಯಡಿಯೂರಪ್ಪನವರು, ಶ್ರೀ ಸಿದ್ಧರಾಮಯ್ಯ, ಶ್ರೀ ಹೆಚ್.ಡಿ. ಕುಮಾರಸ್ವಾಮಿಯವರು ಹಾಗೂ ಭಾರತದ ವಿವಿಧ ರಾಜ್ಯಗಳ ಮುಖ್ಯಮಂತ್ರಿಗಳು ಸ್ವಾಮೀಜಿಯವರನ್ನು ಭೇಟಿ ಮಾಡಿ ಶುಭ ಆಶೀರ್ವಾದವನ್ನು ಪಡೆದು ಹೋಗಿರುತ್ತಾರೆ. ಪೂಜ್ಯ ಸ್ವಾಮೀಜಿಯವರು ಸದಾ ಭಾರತೀಯ ಸಮಾಜದ ಜನತೆಯಲ್ಲಿ ಸಾಮರಸ್ಯ, ಶಾಂತಿಯುತ ಬಾಳ್ವೆಗಾಗಿ ಅವರ ಬಗ್ಗೆ ಅವರೆಲ್ಲರಿಗೂ ಅವರ ಬಗ್ಗೆ ಪೂಜ್ಯ ಗೌರವ ಭಾವನೆ ಇತ್ತು. ಶ್ರೀ ಸಿದ್ಧಗಂಗಾ ಮಠಕ್ಕೆ ಆಗಮಿಸಿ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಪೂಜ್ಯ ಸ್ವಾಮೀಜಿಯವರ ಆಶೀರ್ವಾದ ಪಡೆದ ಸಂದರ್ಭದಲ್ಲಿ ನುಡಿದ ನುಡಿ – ನಮಗೆ ಉತ್ತರದಲ್ಲಿ ಕೈಲಾಸ ಗಂಗೆಯಿದ್ದರೆ, ದಕ್ಷಿಣದಲ್ಲಿ ನಮಗೆ ಶ್ರೀಗಳ ಸಿದ್ಧಗಂಗೆಯಿದೆ ಎಂಬುದಾಗಿದ್ದು ಪವಿತ್ರ ಜಲಗಂಗೆಯ ವಿಶಾಲ ವ್ಯಾಪ್ತಿಯನ್ನು ಸೂಚಿಸಲಾಗಿತ್ತು.

ಶ್ರೀ ಸಿದ್ಧಗಂಗಾ ಪ್ರಕಾಶನದಿಂದ ೧೯೬೪ ರಲ್ಲಿ ಸಿದ್ಧಗಂಗಾ ಮಾಸಿಕದ ಪ್ರಕಟಣೆ ಆರಂಭ ಮಾಡಿ ಈ ಮೂಲಕ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳ ನಿರಂತರ ಚಲನಶೀಲತೆಗೆ ಆಸ್ತಿಭಾರ ಹಾಕಿದರು. ಇಂದಿಗೂ ಮಾಸಿಕ ಪ್ರಕಟವಾಗುತ್ತಿದೆ. ಇದಲ್ಲದೆ ಕೃಷಿ, ಸಾಹಿತ್ಯ, ಆಧ್ಯಾತ್ಮಿಕ ಸಮ್ಮೇಳನಗಳ ರೂವಾರಿಯಾಗಿ ಶ್ರೀಮಠದ ಜಾಗೃತ ಪ್ರಸಿದ್ಧಿಗೆ ಕಾರಣರಾದರು. ಕೃಷಿ ಪ್ರದರ್ಶನ ವ್ಯವಸ್ಥೆ, ವಿದ್ವತ್ ಸಂಭಾಷಣಾ ಗೋಷ್ಠಿ, ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಶ್ರೀಮಠದ ಪರಂಪರೆಗೆ ವರ್ತಮಾನದ ಒಲವುಗಳನ್ನು ಕ್ರೋಡೀಕರಿಸಿ ಸ್ಪಂದನವಿತ್ತರು. ಅಖಿಲ ಭಾರತ ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂಪೂರ್ಣ ಸಮಗ್ರ ನೆರವು ನೀಡಿ ಸಾಹಿತ್ಯ ಸ್ಪಂದನೆಗೆ ಹಾಗೂ ನೆಲದ ಭಾಷೆಗೆ ಹೃತ್ಪೂರ್ವಕ ಗೌರವ ಸಂಧಿಸಿದರು. ತತ್ಪರಿಣಾಮವಾಗಿ ಶ್ರೀಮಠದ ಉತ್ತಮ ಗ್ರಂಥಾಲಯವನ್ನು ರೂಪಿಸಿದರು. ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಸಂಘದ ವತಿಯಿಂದ ಪೂಜ್ಯ ಶ್ರೀಗಳವರ ಹುಟ್ಟುಹಬ್ಬದ ಸಂದರ್ಭದಲ್ಲಿ ಅಂದರೆ ರಜತ ಮಹೋತ್ಸವ, ಸುವರ್ಣ ಮಹೋತ್ಸವ, ಅಮೃತೋತ್ಸವ, ಶತಮಾನೋತ್ಸವ ಸಂದರ್ಭಗಳಲ್ಲಿ ಸಿದ್ಧಗಂಗಾಶ್ರೀ, ದಾಸೋಹಶ್ರೀ, ಅಮೃತಗಂಗಾ ಎಂಬ ವಿದ್ವತ್







ಸಂಶೋಧನಾ ಸಂಪುಟಗಳನ್ನು ಹೊರತರಲಾಯಿತು. ವಿಶೇಷತಃ ಶತಮಾನೋತ್ಸವ ಸಂದರ್ಭದಲ್ಲಿ ಅಂದರೆ ೨೦೦೮ ರಲ್ಲಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಂತರ, ಚಿಂತಕರ, ಜೀವನದರ್ಶನವನ್ನೊಳಗೊಂಡ ವಿದ್ವತ್ ಸಂಪುಟವಾದ 'ಅನುಭಾವಪಥ'ವನ್ನು ಪ್ರಕಟಿಸಲಾಯಿತು. ಹಾಗೂ ಶತಮಾನೋತ್ಸವ ಸಂಸ್ಮರಣಾ ಕೃತಿಗಳಾಗಿ ೧೦೮ ಗ್ರಂಥಗಳನ್ನು ವಿದ್ವಾಂಸರಿಂದ ಬರೆಸಿ ಹೊರತರಲಾಯಿತು. ಪೂಜ್ಯ ಶ್ರೀಗಳಿಂದ ಪ್ರತಿಷ್ಠಾಪನೆಗೊಂಡ ಈ ಸಂಸ್ಥೆಗಳಿಂದ ವಿವಿಧ ಕ್ಷೇತ್ರಗಳ ಸಾಧಕರಿಗೆ ಪ್ರತಿಷ್ಠಿತ ಪ್ರಶಸ್ತಿಗಳನ್ನು ನೀಡಲಾಗುತ್ತಿದೆ.

ಸ್ವಾಮೀಜಿಯವರ ಶತಮಾನೋತ್ಸವ ೨೦೦೮ರ ಸಂದರ್ಭದಲ್ಲಿ ರಾಷ್ಟ್ರಪತಿ ಡಾ. ಅಬ್ದುಲ್ ಕಲಾಂ ಅವರು ಉದ್ಘಾಟನಾ ಸಮಾರಂಭ ಭಾಷಣ ಮಾಡುತ್ತಾ ಪೂಜ್ಯ ಸ್ವಾಮೀಜಿಯವರ ಶತಮಾನೋತ್ಸವ ಸುಸಂದರ್ಭದಲ್ಲಿ ಈ ದೈವಿಕ ವಾತಾವರಣದಲ್ಲಿ ಪಾಲ್ಗೊಳ್ಳುವ ಸುಯೋಗ ನನಗೆ ಒದಗಿಬಂದು ಅತ್ಯಂತ ಸಂತೋಷವನ್ನು ಮಾಡಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದರು. ಪೂಜ್ಯ ಸ್ವಾಮೀಜಿಯವರು ಬೆಳಕು ನೀಡುವ ಮಾರ್ಗದರ್ಶಕರು. ಆಧ್ಯಾತ್ಮಿಕ ಸಂದೇಶವನ್ನು ಜನತೆಗೆ ಹಾಗೂ ಸಮಾಜಕ್ಕೆ ನೀಡುವಂತಹ ಆಧ್ಯಾತ್ಮಿಕ ಬೆಳಕು ಅವರದಾಗಿದೆ ಎಂದು ನುಡಿದರು. ಹೀಗೆ ಮಾನವೀಯ ಪರಿಶ್ರಮ, ಚಿಂತನ, ಕ್ರಿಯಾಶೀಲತೆಗಳಿಂದ ದಾರಿದೀಪವಾಗಿ ಕಂಗೊಳಿಸಿದ ಶ್ರೀಗಳು ಜನತೆಯ ಕಣ್ಣಿನಲ್ಲಿ, ಮಾನಸದಲ್ಲಿ, ಭಾವದಲ್ಲಿ ನಡೆದಾಡುವ ದೇವರು ಆಗಿ ಕಂಡುಬಂದರು. ಅಂತ್ಯದಲ್ಲಿ ಅನಂತವಾಗುವ ಬದುಕನ್ನು ಸಮಾಜದ ಮುಂದೆ ಸಾರ್ಥಕವಾಗಿ ಸಮರ್ಥವಾಗಿ ತೋರಿ ೨೧.೧.೨೦೧೯ ರಲ್ಲಿ ಸಂದುಹೋದರು. ಅವರ ಬದುಕಿಗೆ, ನಿರಂತರ ಸ್ಮರಣೆ ಗೌರವ, ಭಕ್ತಿ ಎಂದೂ ಚಿರಾಯು. ಜನತೆಯ ಹೃದಯದಾಳದಲ್ಲಿ, ಮೆದುಳ ಮೇಲ್ಮೆಯಲ್ಲಿ, ಮನದ ಭಾವದಲ್ಲಿ ಶ್ರೀಗಳ ವ್ಯಕ್ತಿತ್ವ ಸದಾ ಕಾಲ ಸ್ಮರಣ ಜಾಗೃತರು. ಶ್ರೀಗುರುಗಳು ಹಾಕಿಕೊಟ್ಟ ಸತ್ಪಥದಲ್ಲಿ ಅವರ ಉತ್ತರಾಧಿಕಾರಿಯಾಗಿ ಇಂದಿನ ಮಠದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ನಡೆಯುತ್ತಿರುವುದು ಅಭಿನಂದನೀಯವಾಗಿದೆ.




ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರೊಂದಿಗೆ ದಾಸೋಹ ಸೇವೆಯಲ್ಲಿ ನಿರತರಾದ ವಿದ್ಯಾರ್ಥಿಗಳ ತಂಡ

## ನುಡಿನಮನ

# ನಡೆದಾಡುವ ದೇವರು

- ಡಾ|| ಎಸ್. ಪರಮೇಶ್ *

**ದೇಹ ನಿರ್ದೇಹವೆಂದೆನುತಿಪ್ಪರಯ್ಯ; ದೇಹ ನಿರ್ದೇಹದ ಮರ್ಮವನರಿಯರು,<br>ಅಹಂ ಎಂಬುದೇ ದೇಹ ನೋಡಾ, ದಾಸೋಹಂ ಎಂಬುದೇ ನಿರ್ದೇಹ ನೋಡಾ, ಅಹಂ ಭಾವವಳಿದುಳಿದು<br>ದಾಸೋಹಿಯಾದ ಕೂಡಲಚನ್ನಸಂಗ ! ನಿಮ್ಮ ಶರಣ.**

ಪ್ರತಿ ವರ್ಷ ಶ್ರೀಗಳ ಜನ್ಮದಿನೋತ್ಸವ ಬಂದಾಗ ಮನಸ್ಸು ತುಂಬಿ ನಿಲ್ಲುತ್ತದೆ. ಶ್ರೀಗಳೊಟ್ಟಿಗೆ ಕಳೆದ ದಿನಗಳು , ಅವರ ಪಾದ ಸ್ಪರ್ಶಿಸಿದ್ದು , ಅವರ ಜೊತೆಗೆ ನಡೆದ ಅನೇಕ ಘಟನೆಗಳು ಕಣ್ಮುಂದೆ ಬರುತ್ತವೆ. ಇಡೀ ಜಗತ್ತನ್ನು ಸೆಳೆದು ತನ್ಮೂಲಕ ಇಡೀ ಭಕ್ತ ವೃಂದವನ್ನು ಪುನೀತಗೊಳಿಸಿದ ಪೂಜ್ಯ ಶ್ರೀಗಳು ನಮ್ಮನ್ನು ಅನಾಥರನ್ನಾಗಿಸಿ ಲಿಂಗೈಕ್ಯರಾಗಿ ನಮ್ಮ ಹೃದಯದಲ್ಲಿ ಸ್ಥಾಪಿತವಾಗಿ ಪರಂಜ್ಯೋತಿಯಾಗಿ ಹುಟ್ಟಿದ ದಿನವಿದು.



ಬಸವಣ್ಣನವರ ನಂತರ ಆಧುನಿಕ ಬಸವಣ್ಣನಾಗಿ ನಡೆದು ನಮ್ಮ ಈ ಶತಮಾನವನ್ನು ಪೂಜ್ಯಗೊಳಿಸಿದ ಶ್ರೀಗಳು ನಮ್ಮೆಲ್ಲರಿಗೂ ಹಾಕಿಕೊಟ್ಟ ದಾರಿ ಮತ್ತು ಮುಂದಿನ ಶತಮಾನಗಳಿಗೂ ದಾರಿದೀಪವಾಗಿರುವುದು ಸುಳ್ಳಲ್ಲ. ಪೂಜ್ಯರು ಒಂದು ಧಾರ್ಮಿಕ ಪರಂಪರೆಯನ್ನೇ ಸೃಷ್ಟಿಸಿ ಹೋಗಿದ್ದಾರೆ. ಅದು ಜಾತಿಗೆ ಮೀರಿದ್ದು ಪಂಥವನ್ನು ದಾಟಿದ್ದು. ನಾವು ಕೂಡ ಪೂಜ್ಯರ ಕಾಲನುಕ್ರಮದೊಟ್ಟಿಗೆ ಇತಿಹಾಸ ಸೇರಲಿದ್ದೇವೆ . ನಮ್ಮ ಮಕ್ಕಳು ಮೊಮ್ಮಕ್ಕಳು ಕೂಡ ಶ್ರೀಗಳ ಇತಿಹಾಸ ಓದುವಾಗ ನಮ್ಮನ್ನೂ ನೆನಪಿಸಿಕೊಳ್ಳುತ್ತಾರೆ ಎನ್ನುವುದೇ ನಮಗಿರುವ ಪುಣ್ಯದ ಸಂಗತಿ.

ಶ್ರೀಗಳು, ಮಠದ ಮಕ್ಕಳನ್ನು ನೋಡಿದಾಗ ನೆನಪಾಗುತ್ತಾರೆ. ಪಾಕಶಾಲೆ, ಪಾಠಶಾಲೆಗಳಲ್ಲಿ ಮಠದಲ್ಲಿರುವ ಪ್ರತಿ ಜಾನುವಾರುಗಳಲ್ಲಿ ಮತ್ತು ಮಠದ ಪ್ರತಿ ಸ್ಥಳದಲ್ಲೂ ಶ್ರೀಗಳ ಹೆಜ್ಜೆಗುರುತು ಕಾಣಿಸುತ್ತದೆ. ಕೆಲ ದಿನಗಳ ಹಿಂದೆ ಪೂಜ್ಯರನ್ನು ನೆನಪಿಸಿಕೊಂಡ ಗೋವು ಮಠದ ಕಚೇರಿಯ ಬಳಿಯಿರುವ ಶ್ರೀಗಳ ಭಾವಚಿತ್ರದಲ್ಲಿರುವ ಅವರ ಪಾದಕ್ಕೆ ನಮಸ್ಕರಿಸುತ್ತಿರುವುದು ಇತ್ತೀಚೆಗೆ ನಾನು ನೋಡಿ ಪುಳಕಿತನಾದೆ. ಪ್ರತಿಯೊಂದು ಮಗುವು, ಪ್ರತಿ ಗುರುಭಕ್ತರ ಹೃದಯವೂ ಕೂಡ ಶ್ರೀಗಳನ್ನು ನೆನಪಿಸಿಕೊಳ್ಳುವುದು ಇಂತಹ ಸನ್ನಿವೇಶಗಳನ್ನು ನೋಡಿದಾಗಲೇ.

ಮಕ್ಕಳು ಹಾಗೂ ಭಕ್ತರು ಶ್ರೀಗಳವರ ಎರಡು ಕಣ್ಣುಗಳು. ತ್ರಿವಿಧ ದಾಸೋಹ ಅವರು ನಡೆದ ದಾರಿ. ಭಕ್ತರು ಅವರ ಪ್ರತಿಸ್ಮರಣೆಯಲ್ಲೂ ದಾಸೋಹ, ಮಕ್ಕಳು ಹಾಗೂ ಭಕ್ತರಿಗಾಗಿ ಕಾರ್ಯಕ್ರಮಗಳನ್ನು ಮಾಡುವ ಮೂಲಕ ಅವರ ದಾರಿಯಲ್ಲೇ ಸಾಗುವ ಪ್ರಯತ್ನ ಮಾಡುತ್ತಾರೆ. ಅದಕ್ಕಾಗಿಯೇ ಶ್ರೀಗಳ ಜನ್ಮದಿನ ರಾಜ್ಯದ ಮೂಲೆ ಮೂಲೆಗಳಲ್ಲಿಯೂ ದಾಸೋಹ ಕಾರ್ಯಕ್ರಮಗಳು ನಡೆಯುತ್ತವೆ. ಮಠದ ಮಕ್ಕಳು ವಿಶೇಷ ಚೇತನರೂ ಕೂಡ ಶ್ರೀಗಳ ನಾಮ ಜಪಿಸಿ ಅವರು ಪ್ರೀತಿಯಿಂದ ಉಣಬಡಿಸುತ್ತಿದ್ದ ಸಿಹಿ ಪದಾರ್ಥಗಳನ್ನು ಸೇವಿಸುತ್ತಾರೆ. ಈವರೆಗೂ ಮಠದಲ್ಲಿ ಕಲಿತ ಲಕ್ಷಾಂತರ ಮಕ್ಕಳು ಅಂದು ಶ್ರೀಗಳನ್ನು ತಾವು ಇರುವಲ್ಲಿಯೇ ನೆನಪಿಸಿಕೊಂಡು ತಮ್ಮ ಕೈಲಾದ ಸಹಾಯವನ್ನು ಇತರರಿಗೆ ಮಾಡುತ್ತಾರೆ. ಇದು ಶ್ರೀಗಳು ಹಾಕಿಕೊಟ್ಟಿರುವ ದಾರಿ. ಅವರು ತಮ್ಮ ಜೀವನದ ಉದ್ದಕ್ಕೂ ಬೋಧಿಸಿದ್ದು ತ್ರಿವಿಧ ದಾಸೋಹವನ್ನೇ.

ಈಗಲೂ ಶ್ರೀಗಳ ಬಗ್ಗೆ ನನಗೆ ಕುತೂಹಲ ಮೂಡುವ ಸಂಗತಿ ಎಂದರೆ ಅದು ಅವರ ತಿರ್ಮಾನದ ವಿಧಾನ. ಯಾವುದಾದರೂ ಒಂದು ವಿಚಾರವನ್ನು ಶ್ರೀಗಳಿಗೆ ಹೇಳಬೇಕೆಂದರೆ ನಾವು ಸಾಕಷ್ಟು ತಯಾರಿ ನಡೆಸಿಕೊಳ್ಳುತ್ತಿದ್ದೆವು.

* ಮುಖ್ಯಸ್ಥರು, ಶ್ರೀ ಸಿದ್ಧಗಂಗಾ ಆಸ್ಪತ್ರೆ, ತುಮಕೂರು



ನಾವೆಲ್ಲರೂ ಪೂರ್ವಾಪರ ಚರ್ಚೆ ಮಾಡಿಕೊಳ್ಳುತ್ತಿದ್ದೆವು. ಕೊನೆಗೆ ಅವರ ಮುಂದೆ ಹೋಗಿ ನಮ್ಮ ಹೊಸ ಯೋಜನೆಯೋ ಅಥವಾ ಇನ್ನಾವುದೋ ಮುಖ್ಯ ವಿಚಾರ ಹೇಳಿದ ತಕ್ಷಣವೇ ಅದಕ್ಕೆ ತೀರ್ಮಾನ ಹೇಳಿಬಿಡುತ್ತಿದ್ದರು. ಇದು ಆಗಬೇಕಾ ಬೇಡವಾ ಎಂದು. ಈ ಬಗ್ಗೆ ಅವರು ಯಾವಾಗ ತಿಳಿದುಕೊಂಡು ಹೇಗೆ ಇಷ್ಟು ಬೇಗ ಈ ನಿರ್ಧಾರಕ್ಕೆ ಬರೋದಕ್ಕೆ ಸಾಧ್ಯ ಎಂದು ನಾವೇ ಅನೇಕಬಾರಿ ಯೋಚನೆ ಮಾಡುತ್ತಿದ್ದೆವು. ಅವರಿಗೆ ನಮ್ಮ ಮನಸ್ಸಿನ ಪ್ರತಿಗೊಂದಲಗಳು ಯಾವುದೇ ಒಂದು ಹೊಸ ನಿರ್ಧಾರದ ಬಗ್ಗೆ ಇದ್ದ ಅವರ ತಿಳುವಳಿಕೆ ನಮಗೆ ಈಗಲೂ ಸೋಜಿಗವುಂಟುಮಾಡುತ್ತದೆ.

ತ್ರಿವಿಧ ದಾಸೋಹದ ಕಾರುಣ್ಯಮೂರ್ತಿಯಾದ ಶ್ರೀಗಳಿಗೆ ಆರೋಗ್ಯ ಕ್ಷೇತ್ರಕ್ಕೂ ಸೇವೆಯನ್ನು ವಿಸ್ತರಿಸುವ ಕನಸಿತ್ತು. ಆರ್ಥಿಕ ಲೆಕ್ಕಾಚಾರಗಳಿಗೆ ಆತಂಕಪಟ್ಟು ಸುಮ್ಮನಿದ್ದರು. ಸಿದ್ಧಗಂಗಾ ಆಸ್ಪತ್ರೆಯನ್ನು ಸಮಾನಮನಸ್ಕ ವೈದ್ಯರುಗಳಾದ ನಮ್ಮ ತಂಡಕ್ಕೆ ವಹಿಸಿಕೊಟ್ಟು ಸುಮ್ಮನಾಗಿದ್ದರು. ಆದರೆ ಅವರ ಪುಣ್ಯ ತಪಸ್ಸು ಹಾಗೂ ಆಶೀರ್ವಾದದ ಫಲವಾಗಿ ಸಿದ್ಧಗಂಗಾ ಆಸ್ಪತ್ರೆ ವೈದ್ಯಕೀಯ ವಿದ್ಯಾಲಯವಾಗಿ ಬೆಳೆದು ನಿಂತಿದೆ. ಕಳೆದ ಮೂರು ವರ್ಷದಲ್ಲಿ ಸಾವಿರಾರು ಉಚಿತ ಆರೋಗ್ಯ ಶಿಬಿರಗಳನ್ನು ಏರ್ಪಡಿಸಿ ಗ್ರಾಮೀಣರ ಆರೋಗ್ಯ ಕಾಳಜಿ ಮೂಡಿಸಿದ್ದೇವೆ. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಶ್ರೀಗಳ ದೂರದೃಷ್ಟಿ ಹಾಗೂ ಆರೋಗ್ಯ ಕಾಳಜಿಯ ಆಸ್ಥೆಯಿಂದ ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಪ್ರತ್ಯೇಕ ಬ್ಲಾಕ್‌ನಲ್ಲಿ ಉಚಿತ ಸೇವೆ ನೀಡಲಾಗುತ್ತಿದೆ. ಸೂಪರ್ ಸ್ಪೆಷಾಲಿಟಿ ಹೊರತುಪಡಿಸಿದ ಎಲ್ಲಾ ಸೇವೆಗಳು ಉಚಿತವಾಗಿ ರೋಗಿಗಳಿಗೆ ದೊರೆಯುತ್ತಿದೆ. ಇದೆಲ್ಲದರ ಹಿಂದೆ ಪೂಜ್ಯ ಶಿವಕುಮಾರ ಶ್ರೀಗಳ ದಿವ್ಯಾಶೀರ್ವಾದದ ಫಲವಿದೆ.

ಶ್ರೀಗಳ ಜನ್ಮದಿನ ನಮ್ಮ ಭೂಮಂಡಲಕ್ಕೆ ತ್ರಿವಿಧ ದಾಸೋಹ ಪ್ರಜ್ಞೆಯೇ ಜೀವಾಂಕುರವಾದ ದಿನ ಎಂದರೆ ಅತಿಶಯೋಕ್ತಿಯಲ್ಲ. ತನ್ನನ್ನಷ್ಟೇ ಸಲಹಿಕೊಳ್ಳದೆ ದೇಹವೆನ್ನುವ ಜಂಗಮನ ಜೋಳಿಗೆಯಲ್ಲಿ ಇಡೀ ಮನುಕುಲಕ್ಕೆ ದಾಸೋಹದ ತೇರನ್ನು ಹರಿಸಿದ ಪೂಜ್ಯರು ನಮ್ಮ ದೇವರು. ಅವರ ಜನ್ಮದಿನ ಎಲ್ಲಿಯೂ ದಾಸೋಹ ವಿಲ್ಲದೆ ಆಚರಣೆಯಾಗಿಲ್ಲ. ನಾವೆಲ್ಲರೂ ಶ್ರೀಗಳು ತೋರಿದ ದಾರಿಯಲ್ಲಿ ಸಾಗೋಣ. ಸಾಗುವ ದಾರಿಯುದ್ದಕ್ಕೂ ಶ್ರೀಗಳು ತಾಯಿಯಾಗಿ, ಗುರುವಾಗಿ ನಮ್ಮೊಡನೆ ಇರುತ್ತಾರೆ. ■

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ **ನಗದು/ಚೆಕ್**/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨೨

## ನೆನಪಿನಾಳದಿಂದ

# ಮಾತೃತ್ವಕ್ಕೆ ಮಹತ್ವ ತಂದು ಮಹಂತರಾದ ಶ್ರೀ ಶಿವಕುಮಾರ ಮಹಾಶಿವಯೋಗಿಗಳು

– ಬಿ.ಎಂ. ಪರಮೇಶ್ವರಪ್ಪ *

ಭಾರತೀಯ ಸಂಸ್ಕೃತಿಯಲ್ಲಿ ಮಾತೆಗೆ ಮಹತ್ವದ ಮತ್ತು ಗೌರವದ ಸ್ಥಾನ ನೀಡಿದ್ದಾರೆ. ಹೀಗಾಗಿ ತಾಯಿಯನ್ನು ನೋಡುವ ದೃಷ್ಟಿಯೇ ವಿಶೇಷವಾಗಿದೆ. ಈ ಹಿನ್ನಲೆಯಲ್ಲಿ ವಿಚಾರ ಮಾಡಿದಾಗ ಮಾತೆ ಮತ್ತು ಮಾತೃತ್ವ ಎನ್ನುವ ಎರಡು ಪದಗಳನ್ನು ಕಾಣುತ್ತೇವೆ. ವ್ಯಾವಹಾರಿಕವಾಗಿ ತಾಯಿ ಎನ್ನುವ ಪದಕ್ಕೆ ಅರ್ಥೈಸಿದ್ದು ಹೀಗೆ. ಮಕ್ಕಳನ್ನು ಹೆತ್ತು, ಹೊತ್ತು, ಸಾಕಿ, ಸಲಹಿ ಅವರ ಕಾಲ ಮೇಲೆ ನಿಲ್ಲುವಂತೆ ಮಾಡಿದವರಿಗೆ ತಾಯಿ ಅಥವಾ ಮಾತೆ ಎಂದರು. ಇದಕ್ಕಿಂತ ಮಿಗಿಲಾದ ಗೌರವಾದರಗಳಿಗೆ ಪಾತ್ರವಾಗುವಂತಹ ಒಂದು ಅವಸ್ಥೆಯನ್ನು ಅಲಂಕರಿಸುವ ಅವಕಾಶ ತಾಯಿಗಿದೆ, ಅದನ್ನೇ ಮಾತೃತ್ವ ಎಂದರು. ಇದು ವ್ಯಾಪಕವಾದ ಮತ್ತು ವಿಶೇಷವಾದ ಅರ್ಥವನ್ನು ಕೊಡುವ ಪದವಾಗಿದ್ದು ಅಂತಹ ಅವಸ್ಥೆ ಪಡೆದವರು ಮಾತೃಸ್ವರೂಪಿಗಳು ಎಂದರು. ತನ್ನ ಮಕ್ಕಳಿಗೆ ತಾಯಿಯಾದವರಿಗೆ ಮಾತೃ ಎಂದರು. ಎಲ್ಲರ ಮಕ್ಕಳಿಗೆ ತಾಯಿಯಾದವರು ಮಾತೃತ್ವ ಪದವಿಗೆ ಭಾಜನರಾದರು.

**ಮಾತೃತ್ವದ ವಿಶೇಷತೆ ಏನು?**

ಯಾವ ತಾಯಂದಿರು ತಮ್ಮ ಮಕ್ಕಳು ಸಂಸ್ಕಾರವಂತರಾಗಬೇಕು ಅಂದರೆ ಸುಜ್ಞಾನ ಸುಕ್ರಿಯೆಗಳ ಸಂಗಮವಾಗಬೇಕು, ನಾಡಿಗೆ ರಾಷ್ಟ್ರಕ್ಕೆ ಕೀರ್ತಿ ತರುವಂತಹ ಬದುಕನ್ನು ಕಟ್ಟಿಕೊಳ್ಳಬೇಕು, ಭೂಮಂಡಲಕ್ಕೆ ಭಾರವಾಗದಂತೆ ಬದುಕಬೇಕು, ಭಗವಂತ ಕರುಣಿಸಿರುವ ಅದ್ಭುತವಾಗಿರುವ ಭೂಮಂಡಲಕ್ಕೆ ಅವರ ಯಾವುದೇ ಕಾರ್ಯದಿಂದ ಹಾನಿಯಾಗದಂತೆ ನೋಡಿಕೊಳ್ಳುವಂತಹವರಾಗಬೇಕು ಎನ್ನುವ ಉತ್ತಮೋತ್ತಮ ಪ್ರಜೆಯನ್ನಾಗಿ ಪರಿವರ್ತಿಸಲು ಪ್ರಯತ್ನ ಮಾಡುವವರಿಗೆ ಮಾತೃತ್ವ ಪದವಿಗೆ ಸಂವಾದಿಯಾದವರು ಎಂದರು.

ನಮ್ಮ ದೇಶದ ತಾಯಂದಿರು ಹೆಚ್ಚು ಕಲಿತವರಲ್ಲ. ಆದರೆ ಪುರಂದರದಾಸರ ಸಂದೇಶದಂತೆ 'ಮಾನವ ಜನ್ಮ ಬಲು ದೊಡ್ಡದು ಹಾಳು ಮಾಡಿಕೊಳ್ಳಬೇಡಿರೋ ಹುಚ್ಚಪ್ಪಗಳಿರಾ' ಮತ್ತು ನಿಜಗುಣರ ನೇರನುಡಿ. 'ನರಜನ್ಮದಿಂದಿಹದೊಳು ಮಿಗಿಲುಂಟೆ' ಎನ್ನುವ ಅಮೃತವಾಣಿಗೆ ಭಾಜನರಾಗುವಂತೆ, ಹೆಜ್ಜೆಹೆಜ್ಜೆಗೂ ಮಕ್ಕಳಿಗೆ ನೆನಪಿಸುತ್ತಾ ಸುಂದರ, ಸಶಕ್ತ, ಬದುಕನ್ನು ಮಕ್ಕಳು ಕಟ್ಟಿಕೊಳ್ಳುವಲ್ಲಿ ವಿಶ್ರಮಿಸದೆ ಆ ಪಾತ್ರವನ್ನು ನಿರ್ವಹಿಸಿದವರಿಗೆ ಮಾತೃತ್ವ ಪದವಿಗೆ ಭಾಜನರಾದರು ಎಂದು ಗೌರವಿಸಿ ಅವರನ್ನು ಮಹಾಮಾತೆಯರನ್ನಾಗಿ ಕಂಡರು. ಈ ಎಲ್ಲಾ ಕಾರಣದಿಂದಲೇ ಭಾರತೀಯ ಸಂಸ್ಕೃತಿಯಲ್ಲಿ ತಾಯಿಗೆ 'ಮಾತೃದೇವೋಭವ' ಎಂದರು. ಇನ್ನು ಮುಂದುವರಿದು 'ಮಾತೃತ್ವ ಪಡೆದ ಒಬ್ಬ ತಾಯಿಗೆ ಸಾವಿರ ಶಿಕ್ಷಕರು ಸಮಾನ ಎಂದರು'. One True mother is equivalent to thousand teachers ಜಗತ್ತಿನ ಬೇರೆ ಯಾವ ದೇಶದಲ್ಲೂ ಮಾತೆಗೆ ಪೂಜ್ಯಸ್ಥಾನ ಕೊಟ್ಟಿರುವುದು ಕಂಡುಬರುವುದಿಲ್ಲ.

೨೦ನೇ ಶತಮಾನದ ಉತ್ತರಾರ್ಧದವರೆಗೆ ಬಹುತೇಕ ತಾಯಂದಿರು ತ್ಯಾಗಮಯ ಸೇವೆಯಿಂದ ಮಾತೃತ್ವ ಪದವಿಯನ್ನು ಸಹಜವಾಗಿ ಸಂಪಾದಿಸಿಕೊಂಡಿದ್ದರು. ಅವರು ಹೆಚ್ಚು ಕಲಿತವರಾಗಿರಲಿಲ್ಲ ಆದರೆ ಅವರು ಹೆಚ್ಚು ಕಲಿತವರಿಗಿಂತ ಹೆಚ್ಚು ಸುಸಂಸ್ಕೃತರಾಗಿ ಸಂಸ್ಕಾರಿಗಳಾಗಿದ್ದರು. ಅವರ ನಡೆ, ನುಡಿ, ಆಚಾರ, ವಿಚಾರ, ತ್ಯಾಗ, ಸೇವಾಮನೋಭಾವನೆಯಂತಹ ಉದಾತ್ತ ಗುಣಗಳನ್ನು ಅಲಂಕರಿಸಿದ್ದರು. ಆದಕಾರಣ ಇಂದಿಗೂ ಅವರ ನಡೆ, ಸೇವಾ ಆದರ್ಶ ಅನುಕರಣೀಯ. ಈ ಕಾರಣದಿಂದ ಅಕ್ಷರಸ್ಥರಿಗಿಂತ ಅನಕ್ಷರಸ್ಥ ತಾಯಂದಿರು ಎತ್ತರದ ಸ್ಥಾನದಲ್ಲಿ ನಿಲ್ಲುತ್ತಾರೆನ್ನುವುದಕ್ಕೆ.

* ವಿಶ್ರಾಂತ ಕಾರ್ಯಪಾಲಕ ಅಭಿಯಂತರ, ಬಾಸೂರು, ಕಡೂರು ತಾ. ಚಿಕ್ಕಮಗಳೂರು ಜಿಲ್ಲೆ.



ಜನಪದರು ತಮ್ಮ ಅನುಭವದ ಮೂಲಕ ತನ್ನ ಮಗಳಿಗೆ ಮಾರ್ಗದರ್ಶನ ನೀಡುವ ಮಾತುಗಳು ಎಷ್ಟು ಉದಾತ್ತವಾಗಿವೆ ನೋಡಿ

**ಅತ್ತೇಯ ಮನೆಯಲ್ಲಿ ಮುತ್ತಾಗಿ ಇರಬೇಕು ।**
**ಹೊತ್ತಾಗಿ ನೀಡಿದರು ಉಣಬೇಕು । ಮಗಳೇ**
**ತೌರೀಗೆ ಹೆಸರ ತರಬೇಕು ॥**

ಎಂತಹ ಅದ್ಭುತ ಚಿಂತನೆಯ ಸತ್ವದ ನುಡಿಗಳು. ಹಾಗಾದರೆ 'ಮಾತೃತ್ವ ಪದವಿ' ಕೇವಲ ಸ್ತ್ರೀಯರಿಗೆ ಮೀಸಲೇ? ಇದು ಕೇವಲ ಮಕ್ಕಳಿಗೆ ಜನ್ಮನೀಡಿದ ತಾಯಂದಿರಿಗೆ ಏನು? ಮಾತೃತ್ವದ ಗುಣಗಳು ಯಾವುವೆಂದರೆ ೧. ಸಂಸ್ಕಾರಯುತ ವಿದ್ಯೆ ೨. ವಿನಯ ೩. ಶ್ರದ್ಧೆ ೪. ತ್ಯಾಗ ೫. ಸೇವೆ ೬. ಪ್ರಾಮಾಣಿಕತೆ ೭. ಪರೋಪಕಾರ ೮. ಸತ್ಯದ ಸಾಕ್ಷಾತ್ಕಾರ ೯. ಕರುಣೆ ೧೦. ಪ್ರೀತಿ ೧೧. ದಾಸೋಹಂ ಭಾವದ ನಡೆ. ಈ ಮಹಾನ್ ಗುಣಗಳನ್ನು ಸ್ತ್ರೀಪುರುಷರೆಂಬ ಭೇದಭಾವ ಇಲ್ಲದೆ ಯಾರು ಸಾಕ್ಷಾತ್ಕರಿಸಿಕೊಂಡಿರುತ್ತಾರೋ ಅವರು ಮಹಾಮಾತೆಯರಾಗುತ್ತಾರೆ. ಅಂತಹವರಿಗೆ ಮಾತೃತ್ವ ಪದವಿ ಪಡೆದವರು ಎಂದರು. ಅವರು ತಮ್ಮ ಜೀವನಪರ್ಯಂತ ಪವಿತ್ರ ಪದವಿಗೆ ಸಾಕ್ಷಿಯಾಗಿ ಬದುಕಿದರು.

ಭಾರತೀಯ ಸಂಸ್ಕೃತಿಯನ್ನು ಅವಲೋಕನ ಮಾಡಿದಾಗ ಹೆಣ್ಣುಗಂಡು ಎಂಬ ಭೇದವಿಲ್ಲದೆ ಸಾಧನೆ ಮಾಡಿದ ದೊಡ್ಡ ಸಮೂಹವನ್ನೇ ಕಾಣುತ್ತೇವೆ. ಅಂತಹವರ ಸಾಲಿನಲ್ಲಿ ಕೆಲವೇ ಸ್ತ್ರೀಮಣಿಗಳನ್ನು ಹೆಸರಿಸಬಹುದಾಗಿದೆ. ೧. ತಾಯಿ ಶಾರದಾ ದೇವಿಯವರು, ೨. ಭುವನೇಶ್ವರಿ ದೇವಿಯವರು, ೩. ಸಜ್ಜಲಗುಡ್ಡದ ಶರಣಮ್ಮ ತಾಯಿಯವರು, ೪. ಗುಡ್ಡಾಪುರದ ದಾನಮ್ಮನವರು, ತನ್ನ ತಂದೆ ರಾಣಾಪ್ರತಾಪಸಿಂಹನಿಗೆ ಮಾರ್ಗದರ್ಶನ ನೀಡಿದ ಚಂಪ, ಸತ್ಯದ ನುಡಿಗಳ ಮೂಲಕ ತನ್ನ ಗಂಡನಾದ ತುಳಸಿದಾಸನನ್ನು, ರಾಮದಾಸನನ್ನಾಗಿ ಪರಿವರ್ತಿಸಿದ ತುಳಸಿಯವರು..... ಹೀಗೆ ದೊಡ್ಡ ಸಮೂಹವೇ ನಮಗೆ ಗೋಚರಿಸುತ್ತಾರೆ.

ಇನ್ನು ಪುರುಷರತ್ನದಲ್ಲಿ ೧೨ನೆಯ ಶತಮಾನದಲ್ಲಿ ಆಗಿಹೋದ ಅನೇಕ ಶರಣ-ಶರಣೆಯರು. ಆನಂತರದಲ್ಲಿ ಬಂದ ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಅಥಣಿ ಮುರುಘೇಂದ್ರ ಶಿವಯೋಗಿಗಳು, ಉದ್ದಾನ ಶಿವಯೋಗಿಗಳು, ಹಿಂದಿನ ಜಗದ್ಗುರುಗಳಾದ ಪೂಜ್ಯ ವಾಗೀಶ ಪಂಡಿತಾರಾಧ್ಯರು, ಕಾಶಿಯ ವಿಶ್ವನಾಥಾರಾಧ್ಯರು, ಯಲ್ಲಾಲಿಂಗ ಮಹಾರಾಜರು, ಮುಕುಂದೂರು ಬಸವಲಿಂಗ ಶಿವಯೋಗಿಗಳು, ಗದಗದ ಶಿವಾನಂದ ಅಪ್ಪಗಳು, ಬೆಂಗಳೂರಿನ ಸರ್ಪಭೂಷಣ ಶಿವಯೋಗಿಗಳು, ಹಾರನಹಳ್ಳಿ ಕೋಡಿಮಠದ ಶಿವಲಿಂಗಜ್ಜಯ್ಯನವರು, ಬಿಜಾಪುರದ ಬಂಥನಾಳ ಶಿವಯೋಗಿಗಳು ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಇತ್ತೀಚೆಗೆ ಆಗಿಹೋದವರಲ್ಲಿ ಯಾರಾದರೂ ಇದ್ದಾರೆಯೇ ಎನ್ನುವ ಪ್ರಶ್ನೆಗೆ ತಕ್ಷಣ ನಮ್ಮ ಕಣ್ಣಮುಂದೆ ಕಾಣುವರು ೨೦-೨೧ನೇಯ ಶತಮಾನದ ಕೊಂಡಿಯಾಗಿ, ದೀರ್ಘಾಯುಷ್ಯವಂತರಾಗಿ ತಮ್ಮ ಅಖಂಡ ೮೯ ವರ್ಷಗಳ ಸೇವಾಜೀವನದಲ್ಲಿ ನಿಷ್ಕಲ್ಮಶ ಸೇವೆಯ ಮೂಲಕ ಸಂಸ್ಕಾರವಂತ ಲಕ್ಷಾನುಲಕ್ಷ ವಿದ್ಯಾರ್ಥಿಗಳನ್ನು ನಾಡಿಗೆ ನೀಡಿದವರು 'ಸಿದ್ಧಗಂಗೆಯ ಲಿಂ. ಶ್ರೀ ಶ್ರೀ ಶಿವಕುಮಾರ ಮಹಾಶಿವಯೋಗಿಗಳು'. ಪೂಜ್ಯರು ತಮ್ಮ ಪರಮದಾಸೋಹದಿಂದ ಮಾತೃತ್ವ ಪದವಿಗೆ ಭಾಜನರಾದವರು. ಅಕ್ಕರೆಯಿಂದ ಅಪ್ಪಿಕೊಂಡು ವಾತ್ಸಲ್ಯಹೃದಯದ ಮಹಂತರಾದರು. ಇಂತಹ ಮಹಾತ್ಮರನ್ನು ನೋಡಿದಾಗ ಅವರ ನಡೆ, ನುಡಿ, ಆಚಾರ, ವಿಚಾರ, ಎಲ್ಲವೂ ಮಾತುಮನಂಗಳಿದತ್ತತ್ತ ಮೀರಿದ ಅವಸ್ಥೆ. ಇಂತಹವರನ್ನು ಕಂಡೆ ಏನೋ ಉರಿಲಿಂಗ ಪೆದ್ದಿಯವರು ಹೇಳಿದ್ದು

**ಲೋಕದಂತೆ ಬಾರರು । ಲೋಕದಂತೆ ಇರರು ।**
**ಲೋಕದಂತೆ ಹೋಗರು**
**ನೋಡಯ್ಯ ಪುಣ್ಯದಂತೆ ಬಪ್ಪರು ।**
**ಜ್ಞಾನದಂತೆ ಇಪ್ಪರು । ಮುಕ್ತಿಯಂತೆ**
**ಹೋಹರು ನೋಡಯ್ಯ ಉರಿಲಿಂಗದೇವ ।**
**ನಿಮ್ಮ ಶರಣರು ಉಪಮಾತೀತರಾಗಿ ಉಪಮಿಸಬಾರದು.**

ಎನ್ನುವಂತೆ ಇಂತಹ ದೊಡ್ಡವರ ಜೀವನ ಅವಲೋಕನ ಮಾಡುವ ಮೂಲಕ ನಾವು ಉದಾರರಾಗೋಣ. (Lives of greatmen all reminds us, we can make our life sublime) ಹಾಗಾದರೆ ಯಾರು ದೊಡ್ಡವರು. Who is great ತಮ್ಮ ಸಮೀಪ ಬಂದವರನ್ನು ದೊಡ್ಡವರನ್ನಾಗಿ ಯಾರ ಪರಿವರ್ತಿಸುತ್ತಾರೋ ಅವರು ದೊಡ್ಡವರು. He is great who makes feel every great. ಈ ಜಗತ್ತಿನಲ್ಲಿ ಯಾರು ದೊಡ್ಡಮನುಷ್ಯ. ಇಸ್ ದುನಿಯಾಮೆ ಬಡಾ ಆದ್ಮಿ ಕೌನ್ ಹೈ? ಉತ್ತರ : ಯಾರು ಅನ್ಯರ ದುಃಖ ತಿಳಿದು







ಅದನ್ನು ದೂರಮಾಡಲು ಪ್ರಯತ್ನಿಸುವರೋ ಅವರು ದೊಡ್ಡವರು. ಜೋ ದೂಸರೋಂಕ ದುಃಖ ಸಮಜ್‌ತಾಹೈ, ಔರ್ ಉಸಿ ದುಃಖ್‌ಕೊ ದೂರಕರೆನೇ ಕೆ ಕೋಶಿಷ್ ಕರತಾಹೈ ವಹಿ ಬಡಾ ಆದ್ಮೀ ಹೂ'. ಈ ಮೇಲಿನ ಎರಡು ಉದಾಹರಣೆಗಳನ್ನು ಆಧಾರವಾಗಿಟ್ಟುಕೊಂಡು ವಿಚಾರ ಮಾಡಿದಾಗ 'ಪೂಜ್ಯ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರು ತಮ್ಮ ಮಹಾಜೀವನ ಅಥವಾ ಪರಮದಾಸೋಹ ಜೀವನದ ಮೂಲಕ ಮಾತೃಹೃದಯದ ಮಹಂತರಾದರು.

**ಮಾತೃಹೃದಯದ ಮಹಂತರ ನಡೆ ವಿಚಿತ್ರ ಆದರೂ ಅದ್ಭುತ:**

ಪೂರ್ವಾಶ್ರಮದ ಶಿವಣ್ಣನವರು ಯಾವುದೇ ಪೂರ್ವ ನಿಯೋಜನೆ ಇಲ್ಲದೆ ಉದ್ದಾನಶಿವಯೋಗಿಗಳ ಕೃಪೆಗೆ ಪಾತ್ರರಾಗಿ ಪೂರ್ವತಯಾರಿ ಇಲ್ಲದೆ ತಂದೆಯ ಒಪ್ಪಿಗೆಯನ್ನೂ ಪಡೆಯದೆ ೧೬-೦೧-೧೯೩೦ ರಂದು ವಿರಕ್ತಾಶ್ರಮ ಸ್ವೀಕರಿಸಲು ಒಪ್ಪಿದ್ದೇ ವಿಚಿತ್ರ. ಆದರೂ ಸತ್ಯ. ೩೦-೦೩-೧೯೩೦ ರಂದು ಅಧಿಕೃತವಾಗಿ ವಿರಕ್ತಾಶ್ರಮ ಸ್ವೀಕಾರಮಾಡಿ ಸಮಾಜಸೇವೆಗೆ ಸಮರ್ಪಣೆ ಮಾಡಿಕೊಂಡರು. ೧೦ ವರ್ಷಗಳ ಕಾಲ ಅವರ ಗುರುಗಳ ಕಠಿಣ, ನಿಷ್ಠೂರ ಮಾರ್ಗದರ್ಶನದಲ್ಲಿ ತಪ್ಪದೆ ನಡೆದು ಪುಟವಿಟ್ಟ ಚಿನ್ನದಂತಾದರು. ಇದು ಮಾನವತೆಯ ಮಹಾಭಾಗ್ಯ. ಅವರ ಗುರುಗಳು ಹೇಳುತ್ತಿದ್ದ ಮಾತು, ನೋಡಿ ಸ್ವಾಮಿಗಳೇ ಮಕ್ಕಳು ದೇವರ ಸಮಾನ, ಮಠದ ಆಶ್ರಯ ಅರಸಿ ಬಂದ ಮಕ್ಕಳಿಗೆ ಕಿಂಚಿತ್ತೂ ತೊಂದರೆಯಾಗದಂತೆ ಹಾಗೂ ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಳ್ಳಿ. ಹೃದಯಪೂರ್ವಕ ಸೇವೆಯ ಮೂಲಕ ಸತ್ಪ್ರಜೆಗಳನ್ನಾಗಿ ಪರಿವರ್ತಿಸಿ ತನ್ಮೂಲಕ ಮಹಾಮಾತೃತ್ವ ಪದವಿಗೆ ನೀವು ಭಾಜನರಾದರೆ ಶ್ರೀಮಠದ ಗುರು ಪರಂಪರೆ ನಿಮ್ಮನ್ನು ಕಷ್ಟಕಾಲದಲ್ಲಿ ಕೈಹಿಡಿದು ಸದಾ ಕಾಪಾಡುವುದಲ್ಲದೆ ಅದರಿಂದ ಮಠಕ್ಕೂ ಕೀರ್ತಿಯುಂಟಾಗುತ್ತದೆ. ಗುರುಗಳ ಈ ಅಮೃತವಾಣಿಯನ್ನು ಅಪ್ಪಿಕೊಂಡು ಕಾರ್ಯರೂಪಕ್ಕೆ ತಂದು ಇತಿಹಾಸ ನಿರ್ಮಿಸಿದವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು.

**ಮಾತೃತ್ವ ಪದವಿಗೆ ಸಾಕ್ಷಿಯಾದ ಘಟನೆಗಳು :**

೧. ಪೂಜ್ಯರು ಆಶ್ರಮ ಸ್ವೀಕರಿಸಿದ ಸಂದರ್ಭದಲ್ಲಿ ಮಠದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಲಿಲ್ಲ. ಆಶ್ರಯ ಪಡೆದ ಮಕ್ಕಳಿಗೆ ಪ್ರಸಾದದಾಸೋಹದ ವ್ಯವಸ್ಥೆ ಮಾಡುವುದೇ ಕಷ್ಟದಾಯಕವಾಗಿತ್ತು. ಆದರೂ ಧೃತಿಗೆಡದೆ ತುಮಕೂರು ಕಿರಾಣಿ ಅಂಗಡಿಯಲ್ಲಿ ಸಾಲಮಾಡಿ ಸಾಮಾನು ತಂದು ಪ್ರಸಾದ ಪೂರೈಸಿದ ಘಟನೆಗಳಿಗೆ ಲೆಕ್ಕವಿಲ್ಲ. ಒಟ್ಟಿನಲ್ಲಿ ಯಾವ ಕಾರಣಕ್ಕೂ ಮಕ್ಕಳು ಉಪವಾಸಕ್ಕೆ ಒಳಗಾಗಬಾರದು ಎಂಬುದು ಅವರ ಅಚಲ ನಿಲುವಾಗಿತ್ತು. ತುಮಕೂರಿನ ವಂಡಿವರ್ತಕರ ಸಹಕಾರವನ್ನು ಮರೆಯಲಾಗದು ಎನ್ನುವುದು ಅವರ ಹೃದಯಪೂರ್ವಕವಾದ ಮಾತುಗಳಾಗಿದ್ದವು. ಮಾತೃತ್ವ ಹೃದಯವಿದ್ದವರು ಮಾತ್ರ ಈ ರೀತಿ ನಡೆಯಲು ಸಾಧ್ಯವಲ್ಲವೇ?

೨. **ವೃತ್ತಿಗೌರವಕ್ಕೆ ಬೇಕಾಗಿರುವ ಅಗತ್ಯತೆಗಳನ್ನು ಪೂರೈಸಿಕೊಳ್ಳುವುದು** : ೧೯೬೦ರ ದಶಕದ ಘಟನೆ. ಶ್ರೀಮಠದ ಹಳೆಯ ವಿದ್ಯಾರ್ಥಿ ಪದವಿ ಮುಗಿಸಿ ಪ್ರೌಢಶಾಲಾ ಶಿಕ್ಷಕ ತರಬೇತಿಗೆ ಸೇರಿದ. ಪರೀಕ್ಷೆಯ ಪೂರ್ವದಲ್ಲಿ ಶೈಕ್ಷಣಿಕ ಪ್ರವಾಸ ಖಡ್ಡಾಯವಾಗಿತ್ತು. (Education Tour) ಬಡತನ, ಹಣದ ಕೊರತೆ ಪ್ರವಾಸ ತಪ್ಪಿಸಿದರೆ ಪರೀಕ್ಷೆಗೆ ಕೂರಲು ಅವಕಾಶವಿಲ್ಲ. ಒಂದೆರೆಡು ದಿವಸ ಒತ್ತಡದಲ್ಲಿ ಕಳೆದ. ಪೂಜ್ಯರಲ್ಲಿ ಅರಿಕೆ ಮಾಡಿಕೊಂಡರೆ ಸಮಸ್ಯೆಗೆ ಪರಿಹಾರ ಸಿಗಬಹುದೆಂಬ ಭರವಸೆಯೊಂದಿಗೆ ಅವನ ಪರಿಸ್ಥಿತಿ, ಕಷ್ಟಗಳನ್ನು ಪತ್ರದಲ್ಲಿ ಅರಿಕೆ ಮಾಡಿಕೊಂಡ. ಕೊನೆಗೆ ಪ್ರವಾಸ ಹೋಗದಿದ್ದರೆ ಪರೀಕ್ಷೆಗೆ ಕೂರುವ ಅವಕಾಶ ಕಳೆದುಕೊಳ್ಳುತ್ತೇನೆಂದು ಅರಿಕೆ ಮಾಡಿಕೊಂಡಿದ್ದ.

ಮಕ್ಕಳ ಭವಿಷ್ಯ ಉಜ್ವಲವಾಗಿರಬೇಕೆಂಬ ಬಯಕೆ ಪೂಜ್ಯರಲ್ಲಿ ಸದಾ ಜಾಗೃತವಾಗಿರುತ್ತಿತ್ತು. ಅವರ ಹೃದಯ ತಳಮಳಗೊಂಡಿತ್ತು. ಮಠದ ಆರ್ಥಿಕ ಪರಿಸ್ಥಿತಿಯೂ ಕಷ್ಟದಾಯಕವಾಗಿತ್ತು. ಆದರೂ ಗುರುಪರಂಪರೆ ಹೇಗೋ ಪರಿಹರಿಸುತ್ತದೆಂಬ ಭರವಸೆಯೊಂದಿಗೆ ತಕ್ಷಣ ೧೫೦ ರೂ.ಗಳ ಚೆಕ್ ಕಳಿಸಿದ್ದರು. ಮುಂದಿನ ಘಟನೆಯನ್ನು ವಿದ್ಯಾರ್ಥಿಯು ತನ್ನ ಅನುಭವವನ್ನು ಹಂಚಿಕೊಂಡಿದ್ದು ಹೀಗೆ:

ಪ್ರವಾಸಕ್ಕೆ ಹೋದೆ, ಹಣ ಉಳಿಯಿತು. ಆ ಹಣದಲ್ಲಿ ಒಂದು ಜೊತೆ ಉಲ್ಲನ್ ಸೂಟನ್ನು ಕಲ್ಕತ್ತಾದಲ್ಲಿ ಹೊಲಿಸಿಕೊಂಡು ಬಂದೆ. ಪರೀಕ್ಷೆ ಮುಗಿಯಿತು. ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣನಾದೆ. ತಕ್ಷಣ ಕೆಲಸ ಸಿಕ್ಕಿತು. ಮೊದಲನೆಯ ತಿಂಗಳ ಸಂಬಳದಲ್ಲಿ







ಸ್ವಲ್ಪ ಹಣವನ್ನು ಎಂಓ ಮಾಡಿ ಉಳಿದ ಹಣವನ್ನು ತಿಂಗಳು ತಿಂಗಳು ಕಳಿಸುತ್ತೇನೆಂದು ಪತ್ರದಲ್ಲಿ ಅರಿಕೆ ಮಾಡಿಕೊಂಡೆ.

ಆತನ ಅರಿಕೆ ಪತ್ರ ಪೂಜ್ಯರ ಮನಸ್ಸಿಗೆ ಉಲ್ಲಾಸ ತಂದಿತ್ತು. ತದನಂತರ ಪೂಜ್ಯರ ಮನಸ್ಸು ಹೇಗೆ ಯೋಚನೆ ಮಾಡಿತ್ತು ನೋಡಿ. ಯಾರು ಕಲ್ಪನೆ ಮಾಡಲಾಗದ ನಿರ್ಣಯ. ಸ್ವತಃ ತಂದೆತಾಯಿಗಳು ಸಹಾ ಯೋಚನೆ ಮಾಡದಂತಹ ನಿರ್ಣಯ. ತಕ್ಷಣ ಮರುತ್ತರ ಪತ್ರದಲ್ಲಿ ಪೂಜ್ಯರು ಲಿಖಿಸಿದ ಹೃದಯಾಳದ ಮಾತು 'ವೃತ್ತಿಗೌರವಗಳಿಗೆ ಬೇಕಾಗಿರುವ ಅಗತ್ಯತೆಗಳನ್ನು ತಕ್ಷಣ ಪೂರೈಸಿಕೊಳ್ಳುವುದು' ನಂತರ ಸಾಲ ಮುಟ್ಟಿಸುವುದು. ಮೊದಲನೆಯ ತಿಂಗಳು ಸಂಬಳ ತೆಗೆದು ಕೊಂಡು ಹಣ ಕಳಿಸದಿದ್ದರೆ ಮಗನ ಮೇಲೆ ಆರೋಪದ ಮಳೆಯನ್ನೇ ಸುರಿಸುವ ತಂದೆತಾಯಿಗಳನ್ನು ಕಾಣುತ್ತೇವೆ. ಆದರೆ ಪೂಜ್ಯರ ಯೋಚನೆ ಶ್ರೀಮಠದ ವಿದ್ಯಾರ್ಥಿ ಸಮಾಜದಲ್ಲಿ ಗೌರವಯುತವಾಗಿರಬೇಕೆಂಬ ಬಯಕೆಯ ಚಿಂತನೆ. ಎಂತಹ ಉದಾತ್ತ ನಿರ್ಣಯ. ದೊಡ್ಡವರು ದೊಡ್ಡದಾಗಿಯೇ ಯೋಚಿಸುತ್ತಾರೆಂಬುದಕ್ಕೆ ಇದೊಂದು ನಿದರ್ಶನ. ಇದು ದೊಡ್ಡವರು ನಡೆದ ದಾರಿ. ಊಹೆಗೆ ನಿಲುಕದ ದಾರಿ. ಪೂಜ್ಯರ ಆಶೀರ್ವಾದ ಅವನ ಬದುಕಿನಲ್ಲಿ ಬೆಳಕಿನ ದಾರಿ ತೋರಿಸಿತ್ತು. ಕೊನೆಗೆ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತರಾದರು.

(ಮುಂದುವರೆಯುವುದು)

## ಶ್ರೀ ಬಸವೇಶ್ವರ ಯುವಕ ಸಂಘ ಬಸವನಪಾಳ್ಯ

**ತಾವರೆಕೆರೆ ಹೋಬಳಿ, ಮಾಗಡಿ ತಾ॥ ಬೆಂಗಳೂರು ದಕ್ಷಿಣ (ಜಿಲ್ಲೆ)**

ಶ್ರೀ ಬಸವೇಶ್ವರ ಯುವಕ ಸಂಘ ಬಸವನಪಾಳ್ಯದ ಯುವಕರು ಶ್ರೀ ಸಿದ್ಧಗಂಗಾ ಕ್ಷೇತ್ರದ ಬಗ್ಗೆ ಮತ್ತು ಕರ್ನಾಟಕ ರತ್ನ, ತ್ರಿವಿಧ ದಾಸೋಹಿ ನಡೆದಾಡುವ ದೇವರು ಪರಮಪೂಜ್ಯರೂ ಆದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಬಗ್ಗೆ ಅಪಾರ ಭಕ್ತಿ ಗೌರವವಿಟ್ಟುಕೊಂಡಿದ್ದರು. ಬಸವನಪಾಳ್ಯದ ಸುತ್ತಮುತ್ತ ಇರುವ ಯುವಕರು ಮತ್ತು ಭಕ್ತಾದಿಗಳ ಸಹಾಯದಿಂದ ಶ್ರೀ ರೇವಣ್ಣ ಸಿದ್ಧೇಶ್ವರ ಸಮುದಾಯ ಭವನದ ಮಾಲೀಕರಾದ ಶ್ರೀ ವೀರಭದ್ರಯ್ಯ ಮತ್ತು ಮಧುಶೇಖರ್ ಬಿ.ಎನ್ ಇವರ ಮುಖಂಡತ್ವದಲ್ಲಿ



ಗಣಪತಿಹಳ್ಳಿ, ಚುಂಚನಕಟ್ಟೆ, ಚಂದ್ರಪ್ಪ ಸರ್ಕಲ್, ಪುಟಮಾರನಹಳ್ಳಿ, ತಾವರೇಕೆರೆ, ಚಿಕ್ಕವೀರಯ್ಯನಪಾಳ್ಯ, ದೊಡ್ಡಆಲದಮರ, ಹೊಸಪಾಳ್ಯ, ಕಾಳಯ್ಯನಪಾಳ್ಯ, ಎಲಾಬಾಗದಹಳ್ಳಿ, ಕೃಷ್ಣಸಾಗರ ಸುತ್ತಮುತ್ತ ಇರುವ ಗ್ರಾಮಗಳಲ್ಲಿ ರಾಗಿ, ಅಕ್ಕಿ, ಬೆಲ್ಲ, ಎಣ್ಣೆ, ಹುಣಸೇಹಣ್ಣು, ಪೊರಕೆ, ಕುಂಬಳಕಾಯಿ, ತೆಂಗಿನಕಾಯಿ, ಭಕ್ತಾದಿಗಳು ಕೊಡುವ ಪಡಿ ಪದಾರ್ಥಗಳನ್ನು ಶ್ರೀಕ್ಷೇತ್ರಕ್ಕೆ ತಂದು ಅರ್ಪಿಸಿ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು.



ಬೆಂಗಳೂರು ಗ್ರಾಮಾಂತರ ಜಿಲ್ಲೆ ಹೊಸಕೋಟೆ ತಾಲ್ಲೂಕು ಕೆಂಬಳಿಗಾನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘದವರು ದಾಸೋಹಕ್ಕೆ ದವಸ ಧಾನ್ಯಗಳನ್ನು ಸಮರ್ಪಿಸಿ ಧನ್ಯತೆಯನ್ನು ಪಡೆದರು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರೊಂದಿಗೆ ಹಾಲು ಉತ್ಪಾದಕ ಸಂಘದ ಸದಸ್ಯರು

## ಮಹಾದಾಸೋಹ ನಿಧಿಗೆ ಕೊಡುಗೆ

ಬೆಂಗಳೂರಿನ ವಿಜಯನಗರದಲ್ಲಿರುವ ಶ್ರೀ ಜಿ. ಮಂಜುನಾಥ ಪ್ರಸಾದ್ ಹಾಗೂ ಶ್ರೀ ಜಿ. ಸೋಮಶೇಖರ ಅವರು ತಮ್ಮ ತಂದೆ ಶ್ರೀ ಎನ್. ಗಿರೀಶ್ ಹಾಗೂ ತಾಯಿ ಲಿಂ. ಶ್ರೀಮತಿ ಚೆನ್ನಬಸಮ್ಮ ಅವರ ಹೆಸರಿನಲ್ಲಿ ೫ ಲಕ್ಷ ೯೦ ಸಾವಿರ ರೂ.ಗಳನ್ನು ದಾಸೋಹ ನಿಧಿಗೆ ನೀಡಿ ತಮ್ಮ ಭಕ್ತಿಯನ್ನು ಸಮರ್ಪಿಸಿದ್ದಾರೆ.

ಶ್ರೀ ಜಿ. ಮಂಜುನಾಥ ಪ್ರಸಾದ್ ಅವರು ೧೦ ಸಾವಿರ ರೂ.ಗಳನ್ನು ಸಿದ್ಧಗಂಗಾ ಮಾಸ ಪತ್ರಿಕೆಗೆ ನೀಡಿ ಮಹಾಪೋಷಕರಾಗಿದ್ದಾರೆ. ಈ ಸಂದರ್ಭದಲ್ಲಿ ಸಿದ್ಧಗಂಗಾ ಶ್ರೀ ಜಿ. ಮಂಜುನಾಥ ಪ್ರಸಾದ್ ಹಾಗೂ ಶ್ರೀ ಜಿ. ಸೋಮಶೇಖರ್ ಅವರನ್ನು ಅಭಿನಂದಿಸುತ್ತದೆ.



ಶ್ರೀ ಎನ್. ಗಿರೀಶ್



ಲಿಂ. ಶ್ರೀಮತಿ ಚೆನ್ನಬಸಮ್ಮ

ವಿಳಾಸ :
ನಂ. ೧೦೮, ಕೆ.ಎಚ್.ಬಿ.ಎಂ.ಎಸ್. ಬಿಲ್ಡಿಂಗ್,
೧೯ನೇ ಕ್ರಾಸ್, ೨೧ನೇ ಮುಖ್ಯರಸ್ತೆ
(ಮಾರು ಮಂದಿರದ ಹಿಂಭಾಗ),
ವಿಜಯನಗರ, ಬೆಂಗಳೂರು-೫೬೦೦೪೦.
ಮೊ: ೯೩೪೧೨ ೪೧೦೨೧





ಚಿಂತನೆ

# ಕಣ್ಣು ತೆರೆಸುವ ಕಥೆ

– ಡಾ. ಗೊ.ರು. ಚನ್ನಬಸಪ್ಪ *

ಅದು ವಿಶ್ವದಾರ್ಶನಿಕ ಗೌತಮ ಬುದ್ಧನ ಜೀವನದಲ್ಲಿ ನಡೆದ ಪ್ರಸಂಗ. ಅವನು ಒಮ್ಮೆ ಒಂದು ಹಳ್ಳಿಯಲ್ಲಿ ಬಿಡಾರ ಮಾಡಿದ್ದಾಗ, ಆ ಹಳ್ಳಿಯ ಜನ ಅವನ ಬಳಿಗೆ ಒಬ್ಬ ಅಂಧನನ್ನು ಕರೆದುಕೊಂಡು ಬಂದು, "ನಾವು ನಿಮ್ಮ ಬಳಿಗೆ ಒಂದು ವಿಶೇಷ ಕಾರಣಕ್ಕಾಗಿ ಇವನನ್ನು ಕರೆತಂದಿದ್ದೇವೆ. ಇವನು ಬೆಳಕನ್ನು ನಂಬುತ್ತಿಲ್ಲ. ಅದರ ವಿರುದ್ಧವೇ ವಾದ ಮಾಡುತ್ತಾನೆ. ಇವನು ತುಂಬ ಬುದ್ಧಿವಂತಿಕೆಯಿಂದ ತರ್ಕಬದ್ಧವಾಗಿ ವಾದಿಸುತ್ತಾನೆ. ನಮಗೆಲ್ಲ ತಿಳಿದಿರುವಂತೆ ಬೆಳಕು ನಮ್ಮ ಕಣ್ಣ ಮುಂದಿದ್ದರೂ, ಅದು ಇದೆ ಎಂದು ಈ ಅಂಧನಿಗೆ ಮನವರಿಕೆ ಮಾಡಿಕೊಡಲು ಆಗುತ್ತಿಲ್ಲ. 'ಬೆಳಕೆಂಬುದು ಇಲ್ಲವೇ ಇಲ್ಲ' ಎಂಬುದು ಅವನ ವಾದ.

"ಅವನ ವಾದ ಎಷ್ಟು ಸಮರ್ಥನೀಯವೆಂದರೆ, ನಾವು ಆ ವಾದವನ್ನು ನಿರಾಕರಿಸಲೂ ಆಗುವಂತಿಲ್ಲ. ಬೆಳಕು ಎನ್ನುವುದು ಇದ್ದರೆ, ನಾನು ಅದನ್ನು ಮುಟ್ಟಬೇಕು. ಏಕೆಂದರೆ, ನಾನು ವಸ್ತುಗಳನ್ನು ಮುಟ್ಟಿ ಅವುಗಳ ಅಸ್ತಿತ್ವವನ್ನು ತಿಳಿದುಕೊಳ್ಳಬಲ್ಲೆ. ಬೆಳಕನ್ನು ಮುಟ್ಟುವುದೆಂದರೆ ಹೇಗೆ? ಹಾಗೆಯೇ 'ನಾನು ರುಚಿನೋಡಿ ತಿಳಿಯಬಲ್ಲೆ. ಅದರ ರುಚಿ ನೋಡಬೇಕು' ಎನ್ನುತ್ತಾನೆ. 'ವಾಸನೆಯಿಂದ ನಾನು ಗುರುತಿಸಬಲ್ಲೆ' ಎನ್ನತ್ತಾನೆ, ಬೆಳಕಿಗೆ ಯಾವ ವಾಸನೆ ಇದೆ? 'ನನಗಿರುವುದೇ ನಾಲ್ಕು ಇಂದ್ರಿಯಗಳು. ಇನ್ನೊಂದರಿಂದ ಶಬ್ದವನ್ನು ಕೇಳಬಲ್ಲೆ. ಕನಿಷ್ಟ ಬೆಳಕಿನ ಶಬ್ದವನ್ನಾದರೂ ಕೇಳಿಸಿ' ಎನ್ನುತ್ತಾನೆ.

"ನಾವು ಅವನಿಗೆ ಎಷ್ಟು ಹೇಳಿದರೂ ಕೇಳುತ್ತಿಲ್ಲ. ಅಷ್ಟೇ ಅಲ್ಲ. ಅವನು ತನ್ನ ವಾದದಿಂದ ಬೆಳಕು ಇರುವ ಬಗೆಗೆ ನಮಗೂ ಸಂಶಯ ಬರುವಂತೆ ಮಾಡಿದ್ದಾನೆ. ಅವನು ಹೇಳುವುದೂ ಸರಿ ಎಂದು ನಮಗೂ ಅನಿಸತೊಡಗಿದೆ. ಅವನಿಗೆ ಬೇರೆ ಯಾವುದೇ ಕೆಲಸವಿಲ್ಲ. 'ಬೆಳಕು ಎನ್ನುವುದು ಇಲ್ಲವೇ ಇಲ್ಲ. ನಿಮಗೆ ಕಣ್ಣುಗಳಿವೆ ಎನ್ನುವುದೂ ಕೇವಲ ಕಲ್ಪನೆ' ಎಂಬುದನ್ನು ಜನರಿಗೆ ಮನವರಿಕೆ ಮಾಡಿಕೊಡುವಲ್ಲೇ ತೊಡಗಿದ್ದಾನೆ".

"ಇಂತಹ ವ್ಯಕ್ತಿಯನ್ನು ಏನು ಮಾಡುವುದೋ, ಇವನಿಗೆ ಹೇಗೆ ಮನವರಿಕೆ ಮಾಡಿಕೊಡುವುದೋ ನಮಗೆ ತಿಳಿಯದಾಗಿದೆ. ತಾವು ನಮ್ಮೂರಿನಲ್ಲಿ ಬಿಡಾರ ಮಾಡಿರುವುದರಿಂದ ತಮ್ಮಂಥ ಪ್ರಾಜ್ಞರಾದರೂ ಇವನಿಗೆ ಬೆಳಕಿನ ಅಸ್ತಿತ್ವದ ಬಗೆಗೆ ಮನವರಿಕೆ ಮಾಡಿಕೊಡಬಹುದೆಂದು ತಮ್ಮ ಬಳಿ ಕರೆತಂದಿದ್ದೇವೆ"ಎಂದರು.

ಆಗ ಗೌತಮ ಬುದ್ಧ 'ಈ ಅಂಧನ ವಾದ ಸರಿಯಾಗಿದೆ. ಅವನ ಪಾಲಿಗೆ ಬೆಳಕೆಂಬುದಿಲ್ಲ. ಸ್ವತಃ ಬೆಳಕಿನ ಅನುಭವವಾಗದೆ ಅದನ್ನು ಅವನು ಏಕೆ ಒಪ್ಪಿಕೊಳ್ಳಬೇಕು? ಈ ಪ್ರಕರಣದಲ್ಲಿ ತಪ್ಪಿರುವುದು ನಿಮ್ಮಲ್ಲಿ. ಅವನಿಗೆ ಬೆಳಕಿನ ಅಸ್ತಿತ್ವದ ಬಗೆಗೆ ಮನವರಿಕೆಮಾಡಿಸಕೊಡಲು ವಾದಿಸುವುದಕ್ಕೆ ಬದಲಾಗಿ, ಅವನನ್ನು ವೈದ್ಯರ ಬಳಿಗೆ ಕರೆದೊಯ್ಯಬೇಕಾಗಿತ್ತು. ನೀವೀಗ ಅವನನ್ನು ನನ್ನ ಬಳಿ ಕರೆತಂದಿದ್ದೀರಿ. ನಾನು ಅವನಿಗೆ ದೃಷ್ಟಿ ಬರುವಂತೆ ಮಾಡಲಾರೆ. ಆದರೆ ನನ್ನ ವೈದ್ಯನಿಗೆ ಹೇಳುತ್ತೇನೆ" ಎಂದ.

ಗೌತಮ ಬುದ್ಧನ ಸೂಚನೆಯಂತೆ, ಆ ಅಂಧನ ಕಣ್ಣುಗಳನ್ನು ಪರೀಕ್ಷಿಸಿದ ವೈದ್ಯ "ಇದು ಅಂತಹ ದೊಡ್ಡ ಸಮಸ್ಯೆಯೇನಲ್ಲ. ಚಿಕಿತ್ಸೆಮಾಡಿ ಸರಿಪಡಿಸಬಹುದು. ಅದಕ್ಕೆ ಐದಾರು ತಿಂಗಳು ಹಿಡಿಯಬಹುದು" ಎಂದ. ಅದಕ್ಕೆ ಬುದ್ಧ, "ನೀನು, ಆ ಚಿಕಿತ್ಸೆ ಮುಗಿದು, ಅವನು ಪೂರ್ಣ ಗುಣಮುಖನಾಗುವವರೆಗೂ ಈ ಹಳ್ಳಿಯಲ್ಲೇ ಇದ್ದು, ಅವನು ನೋಡುವಂತಾದಾಗ ನನ್ನ ಬಳಿ ಕರೆದು ತಾ" ಎಂದು ವೈದ್ಯನಿಗೆ ಹೇಳಿದ.

ಆಗ ಅಂಧ "ನನ್ನ ವಾದದ ಬಗೆಗೆ ಏನು ಹೇಳುತ್ತೀರಿ?" ಎಂದ. ಅದಕ್ಕೆ ಬುದ್ಧ ನಾನು ಹೇಳಿದಂತೆ ವೈದ್ಯರ ಚಿಕಿತ್ಸೆಯಾದ ನಂತರ ವಾದ ಮಾಡೋಣ. ಈಗ ನಮ್ಮಿಬ್ಬರದು ವಿರುದ್ಧ ದಿಕ್ಕು. ಈಗ ವಾದ ಮಾಡಲು ಸಾಧ್ಯವಾಗುವುದಿಲ್ಲ. ನಿನಗೆ ಕಾಣಲು

---

* ಗ್ರಾಮ ವಿಕಾಸ ಪ್ರತಿಷ್ಠಾನ, ನಂ. ೪೦೬, ಪ್ರಣಾಮ, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಷಿಪ್, ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦೦೯೮







ಸಾಧ್ಯವಿಲ್ಲವಾದ್ದರಿಂದ ಬೆಳಕಿನ ಬಗೆಗೆ ಏನು ಹೇಳುವುದು? ನಿನಗೆ ಬೆಳಕಷ್ಟೇ ಅಲ್ಲ; ಕತ್ತಲೆಯೂ ಕಾಣಿಸುವುದಿಲ್ಲ. ಕತ್ತಲೆ ಕಾಣಬೇಕಾದರೂ ಕಣ್ಣು ಬೇಕು. ಆದ್ದರಿಂದ, ಈ ಹಂತದಲ್ಲಿ ವಾದದಿಂದ ಸಾಧಿಸಿ ತೋರಲಾಗುವುದಿಲ್ಲ. ಕೆಲವು ವಿಷಯಗಳು ವಾದವನ್ನು ಮೀರಿರಬಹುದಾದರೂ, ಅನುಭವವನ್ನು ಮೀರಲಾಗುವುದಿಲ್ಲ" ಎಂದ.

ಆರು ತಿಂಗಳು ಕಳೆಯಿತು. ಅಂಧನಾಗಿದ್ದ ವ್ಯಕ್ತಿಗೆ ಈಗ ದೃಷ್ಟಿ ಶಕ್ತಿ ಬಂದಿತ್ತು. ಹಿಗ್ಗಿನಿಂದ ಕುಣಿಯುತ್ತ ಬಂದು, ಗೌತಮ ಬುದ್ಧನ ಕಾಲಿಗೆ ಬಿದ್ದು ನಮಸ್ಕರಿಸಿ, "ಸ್ವಾಮೀ, ದಯವಿಟ್ಟು ನನ್ನನ್ನು ಕ್ಷಮಿಸಿ. ವಾದಮಾಡಲಾಗದುದನ್ನು ನಾನು ವಾದಿಸುತ್ತಿದ್ದೆ. ಕೇವಲ ಅನುಭವದಿಂದ ಮಾತ್ರ ಅರಿಯಬಹುದಾದುದರ ಬಗೆಗೆ ಮನವರಿಕೆ ಮಾಡಿಕೊಳ್ಳಲು ವಾದಿಸುತ್ತಿದ್ದೆ. ಈಗ ಅದರ ಬಗೆಗೆ ಮಾತನಾಡುವುದೇನೂ ಇಲ್ಲ. ಕಣ್ಣಿಲ್ಲದವರಿಗೆ ಅದನ್ನು ವಿವರಿಸಲೂ ಆಗುವುದಿಲ್ಲ. ನಿಮ್ಮ ಕಾರುಣ್ಯದಿಂದ ನಾನು ಈ ಸೃಷ್ಟಿಯನ್ನು ನೋಡುವಂತಾಯಿತು. ನಾನು ಬರೀ ವಾದದಲ್ಲೇ ಇಡೀ ಜೀವನದ ಬಹುಭಾಗವನ್ನು ಕಳೆದುಬಿಟ್ಟೆ. ಇದೇ ಚಿಕಿತ್ಸೆಯನ್ನು ಮೊದಲೇ ಪಡೆದಿದ್ದರೆ ಎನಿಸುತ್ತಿದೆ. ಕಣ್ಣಿಲ್ಲದ ಜೀವನವೇ ಅಲ್ಲ ಎನ್ನುವುದು ನನಗೀಗ ಅರ್ಥವಾಗಿದೆ. ನಾನೀಗ ಅಸ್ತಿತ್ವದ ಸೌಂದರ್ಯವನ್ನು, ಹೂ-ಬಳ್ಳಿ, ಮರಗಿಡಗಳ ಸೌಂದರ್ಯವನ್ನು, ಸೂರ್ಯೋದಯ-ಸೂರ್ಯಾಸ್ತಮಾನಗಳ ವೈಭವವನ್ನು, ರಾತ್ರಿಯ ನಕ್ಷತ್ರಗಳ ಬೆಡಗನ್ನು, ಮಾನವ ಜೀವನದ ಅಂದವನ್ನು ನೋಡುತ್ತಿದ್ದೇನೆ. ಒಂದು ವೇಳೆ ನಿಮ್ಮ ಕೃಪೆಯಾಗದೆ ಇದ್ದಿದ್ದರೆ, ನಾನು ಈ ಸೃಷ್ಟಿಯ ಅಗಾಧ ಸೌಂದರ್ಯದ ದರ್ಶನದಿಂದ ಎರವಾಗಿ ವೃಥಾ ಸತ್ತುಹೋಗುತ್ತಿದ್ದೆ. ನನಗೆ ದೃಷ್ಟಿಶಕ್ತಿ ಬಂದುದರಿಂದಾಗಿ ಈ ದರ್ಶನಾನುಭವ ಸಾಧ್ಯವಾಯಿತು" ಎಂದು ಕೃತಜ್ಞತೆ ಅರ್ಪಿಸಿದ.

ಈ ಪ್ರಸಂಗವು ಕಥೆಯಲ್ಲಿ ಬರುವ ಅಂಧನ ಕಣ್ಣನ್ನು ಮಾತ್ರವಲ್ಲ; ಲೋಕದ ಕಣ್ಣನ್ನೇ ತೆರೆಸುತ್ತದೆ. ಇಲ್ಲಿ ಆ ಹಳ್ಳಿಯ ಜನ ಬರೀ ವಾದದಲ್ಲೇ ಕಾಲಕಳೆದಿದ್ದರೇ ವಿನಃ ಅಂಧತ್ವದ ನಿವಾರಣೆಗೆ ಪ್ರಯತ್ನಿಸಿರಲಿಲ್ಲ. ವೈದ್ಯರ ಬಳಿಗೆ ಅವನನ್ನು ಕರೆದೊಯ್ದಿರಲಿಲ್ಲ. ಈಗ ಬೆಳಕನ್ನು ತನ್ನ ಕಣ್ಣಾರೆ ಕಂಡ ನಂತರ, ಆ ಅಂಧನ ಅನುಭವವೇ ಬೇರೆ. ಅನುಭವದ ಬಗೆಗೆ ವಾದಿಸುವುದೇನಿದೆ?

ಗೌತಮ ಬುದ್ಧ ಆ ಅಂಧನನ್ನು ತನ್ನ ಬಳಿಗೆ ಕರೆತಂದಾಗ ಅವನೊಡನೆ ವಾದಿಸಹೋಗಲಿಲ್ಲ. ಯಾವುದೇ ಉಪದೇಶ ಮಾಡಲಿಲ್ಲ. ಆ ಸಮಸ್ಯೆಗೆ ಪರಿಹಾರ ಮುಖ್ಯವಾಗಿತ್ತು. ಅಂತೇ ತನ್ನ ವೈದ್ಯರಿಂದಲೇ ಆ ಅಂಧನಿಗೆ ಚಿಕಿತ್ಸೆ ಕೊಡಿಸಿ, ಅವನಿಗೆ ಬೆಳಕಿನ ಅನುಭವವಾಗುವಂತೆ ಮಾಡಿದ. ಇದು ನಿಜವಾದ ಮಾನವೀಯ ಸೇವೆ.

ಸಮುದಾಯದ ಸುಧಾರಣೆ ಬಯಸುವವರೆಲ್ಲ ಅರ್ಥಮಾಡಿಕೊಳ್ಳಬೇಕಾದ ಅಂಶವೆಂದರೆ, ಕೇವಲ ವಾದ-ವಿವಾದ ಕೇವಲ ಉಪದೇಶ ಇವುಗಳಿಗಿಂತ ಪರಿಣಾಮಕಾರಿಯಾದದ್ದು ಪ್ರತ್ಯಕ್ಷಸೇವೆ ಎನ್ನುವುದು. ಗೌತಮಬುದ್ಧನ ಸೇವೆ ಸಮಾಜ ಸೇವಕರೆಲ್ಲರ ಕಣ್ಣು ತೆರೆಸಬೇಕು. ■

## ಶ್ರೀವಾಣಿ

ಧರ್ಮದ ತಳಹದಿಯ ಮೇಲೆ ಕಟ್ಟಲ್ಪಡುವ ನಾಗರಿಕತೆ ಸುಸಂಸ್ಕೃತವಾದದ್ದು. ನಮ್ಮ ಸಮಸ್ತ ಕ್ರಿಯಾಮುಖದಲ್ಲೂ ಧರ್ಮಬುದ್ಧಿ ಬಲಿತು ಬರದಿದ್ದರೆ, ನಾವು ಎಷ್ಟೇ ನಾಗರಿಕರೆನಿಸಿದರೂ ಸುಸಂಸ್ಕೃತರೆನಿಸಲಾರೆವು. ನಮಗೆ ಗಳಿಕೆ ಬಳಕೆಗಳೆರಡರ ಅರ್ಥವೂ ಆಗಬೇಕು. ಸಂಪಾದಿಸುವುದನ್ನೆಲ್ಲ ಧರ್ಮಬುದ್ಧಿಯಿಂದಲೇ ಸಂಪಾದಿಸಿ, ಧರ್ಮಬುದ್ಧಿಯಿಂದಲೇ ಅರಿತು ಬಳಕೆ ಮಾಡಬೇಕು. ಇದನ್ನು ಶರಣರು 'ದಾಸೋಹಂಭಾವ'ವೆಂದು ಕರೆದಿದ್ದಾರೆ.

* * *

ರಾಷ್ಟ್ರ ಮುಂದುವರಿಯಬೇಕಾದರೆ ಜನರು ಕ್ರಿಯಾಶೀಲರಾಗಿ ಕಷ್ಟಪಟ್ಟು ಕೆಲಸ ಮಾಡಬೇಕು. ದುಡಿಮೆಗೆ ಮಹತ್ತರವಾದ ಸ್ಥಾನ ಉಂಟು. ಸ್ವಾತಂತ್ರ್ಯ ಬಂದ ಮೇಲೆ ಉಂಟಾಗಿರ ತಕ್ಕಂತಹ ಒಂದು ತಪ್ಪು ಕಲ್ಪನೆ ಎಂದರೆ ಕಷ್ಟಪಡದೆ ಆರಾಮ ಜೀವನ, ಸುಖವಾಗಿರಬೇಕೆಂಬ ಆಕಾಂಕ್ಷೆವುಳ್ಳವರ ಸಂಖ್ಯೆ ಹೆಚ್ಚಾಗಿದೆ. ಸರ್ಕಾರವೇ ತಾನಾಗಿಯೇ ಎಲ್ಲವನ್ನೂ ಕೊಡಬೇಕು ಎಂಬ ಭಾವನೆ ಬೇರೂರಿದೆ. ಇದು ಯಾವ ರಾಷ್ಟ್ರಕ್ಕೂ ಶುಭಸೂಚನೆ ಅಲ್ಲ.







ನುಡಿಗೌರವ

# ಕಾವ್ಯದ ಹೂಮಳೆ ಸುರಿಸಿದ, ಮೃದುಮಾತಿನ ಅನನ್ಯ ಕವಿ, ನಾಡೋಜ ಡಾ. ಚೆನ್ನವೀರ ಕಣವಿ

- ಎಚ್.ಎಸ್. ಸಿದ್ಧಗಂಗಪ್ಪ *



ನಾಡಿನ ಶ್ರೇಷ್ಠ ಕವಿಗಳಲ್ಲಿ ಒಬ್ಬರಾಗಿದ್ದ ಭಾವಜೀವಿ, ಸಮನ್ವಯ ಕವಿ, ಸೌಜನ್ಯದ ಕವಿ, ಹೊಸಕನ್ನಡ ಕಾವ್ಯ ಪರಂಪರೆಯ ಹಿರಿಯ ತಲೆಮಾರಿನ ಕವಿ, ಕನ್ನಡ ಸಾಹಿತ್ಯ ಲೋಕವನ್ನು ಶ್ರೀಮಂತಗೊಳಿಸಿದ ಸದ್ಗುಣ ಸಂಪನ್ನ ಕವಿ, ಹೃದಯ ವೈಶಾಲ್ಯತೆಯುಳ್ಳ ನಿಸರ್ಗ ಕವಿ, ಸ್ನೇಹಜೀವಿ, 'ಹೊಗೆ ತುಂಬಿ, ನಗೆ ತುಂಬಿ, ಬಣ್ಣ ಬಣ್ಣದ ನವಿರು ಕಾಗದದ ಬುಟ್ಟಿಯಲ್ಲಿ ಜೀವ ತುಂಬಿ', ವಿಶ್ವಭಾರತಿಗೆ ಕನ್ನಡ ಭಾರತಿ ಬೆಳಗಿದ, ಕನ್ನಡಿಗರ ಮನದಲ್ಲಿ ಕನ್ನಡ ಜಾಗೃತಿ ಮೂಡಿಸಿದ ಕವಿ, ಕಾವ್ಯವನ್ನೇ ಉಸಿರಾಗಿಸಿಕೊಂಡು, ಜೀವಸಂಗಾತಿಯನ್ನಾಗಿ ಮಾಡಿಕೊಂಡಿದ್ದ, ಮಾನವೀಯ ಮೌಲ್ಯಗಳನ್ನು ಪ್ರತಿನಿಧಿಸುತ್ತಿದ್ದ ಕವಿ ನಾಡೋಜ ಚೆನ್ನವೀರ ಕಣವಿಯವರು ಎಂದು ಹೇಳುವಾಗ ಹೃದಯತುಂಬಿ ಬರುತ್ತದೆ.

ಕನ್ನಡಕ್ಕೆ ಸಮೃದ್ಧವಾದ ಕಾವ್ಯ ಪರಂಪರೆಯನ್ನು ನಿರ್ಮಿಸಿ, ಅರಿವಿನ ಚಿಂತನೆಯ ಹೊಸ ಬೆಳಕು ನೀಡಿದವರು. ಉದಾರವಾದ ಮಾನವತಾವಾದದಲ್ಲಿ ಕಾವ್ಯವನ್ನು ನೆಲೆಗೊಳಿಸಿದ, ಕರ್ನಾಟಕ ಏಕೀಕರಣ, ಗೋಕಾಕ ಚಳವಳಿ, ಕನ್ನಡಪರ ಹೋರಾಟಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ಆ ಚಳವಳಿಗಳಿಗೆ ಶಕ್ತಿ, ಉತ್ಸಾಹ ತುಂಬಿದವರು, ಸಾಂಸ್ಕೃತಿಕ ಕ್ಷೇತ್ರದ ನಾಯಕರಂತಿದ್ದ ಕಣವಿಯವರು, ತಮ್ಮದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ.

ಡಾ. ಚೆನ್ನವೀರ ಕಣವಿಯವರು ಏಳು ದಶಕಗಳ ಕಾಲ ನಿರಂತರವಾಗಿ ಕಾವ್ಯಧಾರೆ ಹರಿಸಿದ ಕವಿ. 'ಹೂವು ಹೊರಳುವವು ಸೂರ್ಯನ ಕಡೆಗೆ. ನಮ್ಮ ದಾರಿ ಬರಿ ಚಂದ್ರನವರೆಗೆ' ಕವನದ ಮೂಲಕ ಮನುಷ್ಯ ಚಂದ್ರನತ್ತ ಪಯಣ ಬೆಳೆಸಿದರೆ, ನಿಸರ್ಗ ಸ್ವಯಂಪ್ರಭೆಯ ಸೂರ್ಯನಿಗೆ ಮುಖ ಮಾಡಿದೆ. ಇಂದು ವಿಶ್ವದಲ್ಲಿ ಮನುಷ್ಯ ಅಹಂಕಾರದಿಂದ ನಿಸರ್ಗದ ವಿರುದ್ಧ ಸಾಗುತ್ತಿದ್ದಾನೆ; ಪ್ರಜ್ಞಾ ಪ್ರಕಾಶದಲ್ಲಿ ನಾವು ಮುನ್ನಡೆಯುವ ಅಗತ್ಯವನ್ನು ಅವರು ಪ್ರತಿಪಾದಿಸಿದ್ದಾರೆ. ನನ್ನ ನಂಬಿಕೆಯೊಂದು ಆಕಾಶ ನಿಜ, ಆದರೆ ತಲೆಬುಡವಿಲ್ಲ. ನಾನೆಷ್ಟು ಬೆಳೆದರೂ ನನಗೆ ನಿಲುಕುವುದಿಲ್ಲ' ಎಂಬುದು ಕಣವಿಯವರ ಕಾವ್ಯ ಜಿಜ್ಞಾಸೆಯಾಗಿದೆ.

ನಾಡೋಜ ಕಣವಿಯವರು 'ಸುನೀತಗಳ ಸಾಮ್ರಾಟ್' ಎಂದೇ ಕಾವ್ಯಲೋಕದಲ್ಲಿ ಪ್ರಸಿದ್ಧರು. ಹೊಸಗನ್ನಡ ಕಾವ್ಯದಲ್ಲಿ ಅವರಷ್ಟು ಸುನೀತಗಳನ್ನು ಬರೆದ ಕವಿ ಮತ್ತೊಬ್ಬರಿಲ್ಲ ಎಂಬುದು ವಿಮರ್ಶಕರ ಮಾತು. ಕಳೆದ ಶತಮಾನದ ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಚಳವಳಿಗಳಲ್ಲಿ ನಿರಂತರವಾಗಿ ಸುನೀತಗಳನ್ನು ಬರೆಯುತ್ತಾ ಬಂದ ಚೆನ್ನವೀರ ಕಣವಿಯವರು ಕಾವ್ಯಲೋಕಕ್ಕೆ ತಮ್ಮದೇ ಆದ ಅನನ್ಯ ಕೊಡುಗೆಯನ್ನು ನೀಡಿದ್ದಾರೆ.

ಕನ್ನಡ ನಾಡು, ನುಡಿಯ ಬಗ್ಗೆ ಅಪಾರವಾದ ಅಭಿಮಾನ, ಕಳಕಳಿಯನ್ನು ಹೊಂದಿದ್ದ ಕಣವಿಯವರು ನೆಲ, ಜಲ, ಭಾಷೆಗೆ ಕುತ್ತು ಬಂದಾಗ ತೀವ್ರವಾಗಿ ಪ್ರತಿಭಟಿಸಿದ್ದಾರೆ, ಖಂಡಿಸಿದ್ದಾರೆ. ಅವರು ಬರೆದ ಕನ್ನಡಗೀತೆ 'ಹೆಸರಾಯಿತು

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧



ಕರ್ನಾಟಕ, ಉಸಿರಾಗಲಿ ಕನ್ನಡ ! ಹಸಿಗೋಡೆಯ ಹರಳಿನಂತೆ ಹುಸಿಹೋಗದ ಕನ್ನಡ' ಗೀತೆ ಗೋಕಾಕ ಚಳವಳಿಯಲ್ಲಿ ರಾಜ್ಯದಾದ್ಯಂತ ಪ್ರಚಾರ ಪಡೆಯಿತು. ಸಂಚಲನ ಮೂಡಿಸಿತು. ಅವರು ಬರೆದ 'ವಿಶ್ವಭಾರತಿಗೆ ಕನ್ನಡದಾರತಿ ಮೊಳಗಲಿ ಮಂಗಳ ಜಯಭೇರಿ' ಗೀತೆಯನ್ನು ಓದಿದ ರಾಷ್ಟ್ರಕವಿ ಕುವೆಂಪುರವರು ನನ್ನಲ್ಲಿ ರೋಮಾಂಚನವನ್ನುಂಟು ಮಾಡಿತು ಎಂದು ಹೇಳಿರುವುದು ಒಬ್ಬ ಶ್ರೇಷ್ಠ ಕವಿ, ಮತ್ತೊಬ್ಬ ಶ್ರೇಷ್ಠ ಕವಿಯ ಕವನದ ಬಗ್ಗೆ ಪ್ರಶಂಸಿಸಿರುವುದು ಕಣವಿಯವರ ಕಾವ್ಯ ಪ್ರತಿಭೆಗೆ ನೀಡಿದ ಮಹೋನ್ನತ ಗೌರವವಾಗಿದೆ.

ಶಾಲೆಗಳಲ್ಲಿ ಕನಿಷ್ಠ ೧೦ನೇ ತರಗತಿಯವರಿಗಾದರೂ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂಬುದು ಅವರ ನಿಲುವಾಗಿತ್ತು. ಅವರು ಕನ್ನಡ ಶಾಲೆಗಳ ವಿಲೀನ-ಸರ್ಕಾರಿ ಶಾಲೆಗಳಲ್ಲಿ ಇಂಗ್ಲೀಷ್ ಮಾಧ್ಯಮ ಆರಂಭ ಕುರಿತು ಸರ್ಕಾರದ ನಿಲವನ್ನು ತೀವ್ರವಾಗಿ ಅನೇಕ ಸಲ ಟೀಕಿಸಿದ್ದರು. 'ಕನ್ನಡ ಶಾಲೆಗಳನ್ನು ಮುಚ್ಚುವ ಮೊದಲು ಆತ್ಮಾವಲೋಕನ ಮಾಡಿಕೊಳ್ಳಬೇಕು' ಎಂದು ಕಟುವಾಗಿ ವಿರೋಧಿಸಿದ್ದರು. ಭಾಷಾ ಮಾಧ್ಯಮ ವಿಚಾರವಾಗಿ ಕಾನೂನು ಹೋರಾಟದಲ್ಲಿ ಹಿನ್ನಡೆಯಾಗಿದೆ. ಸಮಾನತೆ ಹಾಗೂ ಸಾಮಾಜಿಕ ನ್ಯಾಯದ ತಳಹದಿ ಮೇಲೆ ಕನಿಷ್ಠ ೧೦ನೇ ತರಗತಿವರಿಗಾದರೂ ಮಕ್ಕಳ ಕಲಿಕೆ ಮಾತೃಭಾಷಾ ಮಾಧ್ಯಮದಲ್ಲಿರಬೇಕು" ಎಂದು ಒತ್ತಾಯ ಮಾಡಿದ್ದರು.

ನಾಡೋಜ ಚೆನ್ನವೀರ ಕಣವಿ ಅವರು ಕರ್ನಾಟಕದಲ್ಲಿ ಕಾವ್ಯ ಸಂಸ್ಕೃತಿಯನ್ನು ನಿರ್ಮಾಣ ಮಾಡಿದಂತೆ ಪುಸ್ತಕ ಸಂಸ್ಕೃತಿ ಪ್ರಸಾರವನ್ನು ಮಾಡಿದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಸಾರಾಂಗದ ಮೊದಲ ನಿರ್ದೇಶಕರಾಗಿ ೫೦೦ಕ್ಕೂ ಹೆಚ್ಚು ಮೌಲಿಕ ಪುಸ್ತಕಗಳನ್ನು ಪ್ರಕಟಿಸಿದರು. ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಜಾರೋಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿ ಸಾಹಿತ್ಯಾಸಕ್ತರ ಜ್ಞಾನಕ್ಷಿತಿಜವನ್ನು ವಿಸ್ತರಿಸಿದರು.

ಚೆನ್ನವೀರ ಕಣವಿಯವರು ಸೌಮ್ಯತೆಗೆ, ಮೃದು ಸ್ವಭಾವಕ್ಕೆ ಮತ್ತೊಂದು ಹೆಸರು ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಸಮಾಜದಲ್ಲಿ ತಾಂಡವವಾಡುತ್ತಿರುವ ರಾಜಕೀಯ ಭ್ರಷ್ಟಾಚಾರವನ್ನು ತಮ್ಮ ಕಠೋರ ವ್ಯಂಗ್ಯದ ನುಡಿಗಳ ಮೂಲಕ ರಾಜಕಾರಣಿಗಳಿಗೆ ಚಾಟಿಬೀಸಿದ್ದರು. ಇದಕ್ಕೆ ಮಠಾಧಿಪತಿಗಳೂ ಹೊರತಾಗಿರಲಿಲ್ಲ.

**"ನಾಡಿನ ತುಂಬ ನೂರು ಜಗದ್ಗುರು
ಇರುವುದು ಜಗವೊಂದೇ
ಕಾಡಿನ ತುಂಬ ಬಣ್ಣದ ಹೂಗಳು
ವಾಸನೆ ಕೆಲವೊಂದೇ
ಬತ್ತಿ ಹೋದ ಕೆರೆಯಲ್ಲಿ ಬಂಗಲೆಗಳು ಎದ್ದಿವೆ
ಜಲದೇವತೆಗೆ ಎಷ್ಟೊಂದು ಗೋರಿಗಳು...."**

ಚೆನ್ನವೀರ ಕಣವಿಯವರಿಗೂ ಹಾಗೂ ವರಕವಿ ಬೇಂದ್ರೆಯವರಿಗೂ ಅವಿನಾಭಾವ ಸಂಬಂಧವಿತ್ತು. ಬೇಂದ್ರೆ ನಂತರ ಅವರ ಉತ್ತರಾಧಿಕಾರಿಯಂತೆ ಕಣವಿಯವರು ಕಾವ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದರು. ಅವರ ಮೊದಲ ಸಂಕಲನ ಕಾವ್ಯಾಕ್ಷಿಗೆ ಬೇಂದ್ರೆಯವರು ಮುನ್ನುಡಿ ಬರೆದು "ಕಣವಿ ಅವರ ಕವನದಲ್ಲಿ ಜೀವಂತದ ಗತಿ ಇದೆ. ಮಾತಿಗೆ ಅಚ್ಚುಕಟ್ಟು ಇದೆ. ಅಲ್ಪಸಂತುಷ್ಟಿ ಇಲ್ಲ, ಮಹತ್ತಿನ ಕಡೆಗೆ ಎಳೆತವಿದೆ" ಎಂದು ಪ್ರಶಂಸಿಸಿದ್ದರು. ಅಲ್ಲದೆ ಅವರ 'ನೆಲ ಮುಗಿಲು' ಕವನ ಸಂಕಲನಕ್ಕೆ ಮುನ್ನುಡಿ ಬರೆದು ಅವರ ಕಾವ್ಯ ಪ್ರತಿಭೆಗೆ ಹರ್ಷ ವ್ಯಕ್ತಪಡಿಸಿದ್ದರು.

ನಿಸರ್ಗ ಕವಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಕಣವಿಯವರು ಅವರ ಕವಿತೆಗಳಲ್ಲಿ ನಿಸರ್ಗಪ್ರಿಯತೆ, ಅನುಭಾವಿಕ ದೃಷ್ಟಿ, ಮಾನವೀಯತೆ, ಮೌಲ್ಯಪ್ರಜ್ಞೆ ಇರುವುದನ್ನು ಗುರುತಿಸಿದ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಕನ್ನಡ ಕಾವ್ಯಕ್ಕೆ ಹೊಸನೆತ್ತರಿನ





ಕೊಡುಗೆ ಎಂದು ಶ್ಲಾಘಿಸಿದ್ದಾರೆ. ಶಾಂತಿನಾಥ ದೇಸಾಯಿ ಅವರು 'ಕನ್ನಡ ನಾಡಿನ ರಾಜಕವಿ' ಎಂದು ಹೇಳಿದರೆ, ಹಿರಿಯ ವಿಮರ್ಶಕ ಡಾ. ಜಿ.ಎಸ್. ಅಮೂರ್ ಅವರು "ಸಮಚಿತ್ತ, ಸಮದರ್ಶನ, ಸಮತೋಲನದ ಕವಿ, ಚಿಂತಕ' ಎಂದು ಪ್ರಶಂಸಿಸಿದ್ದಾರೆ.

'ಕಣವಿ ಕಾವ್ಯದಲ್ಲಿ ಧಾರವಾಡ ತತ್ತ್ವ ಅಡಗಿದೆ' ಎಂದು ಕುರ್ತಕೋಟಿಯವರು ಹೇಳಿದರೆ, ಗೌರೀಶ ಕಾಯ್ಕಿಣಿ ಅವರು 'ಕಣವಿ ಕವಿತೆಗಳಲ್ಲಿ ಕಲಾಸೌಷ್ಠವ ತುಂಬಿದೆ' ಎಂದರೆ, ವಿಮರ್ಶಕ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು "ಕಣವಿ ಅವರದು ಸುಸಂಸ್ಕೃತ ಮನಸ್ಸಿನ ಸುಂದರ ಅಭಿವ್ಯಕ್ತಿ' ಎಂದು ಬಣ್ಣಿಸಿದ್ದಾರೆ. ಕವಿ ರಾಘವೇಂದ್ರ ರಾವ್ ಅವರು 'ಕಣವಿ ಕಾವ್ಯದಲ್ಲಿ ಭಾವಗೀತಾತ್ಮಕತೆ ಇದೆ. ಕಣವಿಯವರ ಜೀವನವೇ ಕಾವ್ಯ. ಕಾವ್ಯವೇ ಜೀವನ ಎಂದು ತಿಳಿದು ಬಾಳಿದ ಮಾನವಾನುಭವದ ಕವಿ' ಎಂದು ಹೇಳಿದ್ದಾರೆ.

"ನವೋದಯ ಕಾವ್ಯ ಸಮೃದ್ಧವಾಗಿದ್ದಾಗ ಕಣವಿ ಅವರ ಕಾವ್ಯಯಾನ ಆರಂಭವಾಯಿತು. ಶಕ್ತಿಶಾಲಿ ಕಾವ್ಯ ಮಾರ್ಗವಿದ್ದಾಗ ತಮ್ಮದೇ ಆದ ಹಾದಿ ಕಂಡುಕೊಳ್ಳುವುದು ಸೃಜನಶೀಲ ಕವಿಯ ಸಾಹಸವೇ ಆಗಿರುತ್ತದೆ. ಮಾನವೀಯತೆ, ನಿಸರ್ಗ ಪ್ರಿಯತೆ, ಆದರ್ಶವಾದ, ಅನುಭಾವಿಕತೆ, ನೆಲದ ಪ್ರೀತಿ, ನವೋದಯ ಕಾವ್ಯದ ಲಕ್ಷಣಗಳು. ಇದನ್ನು ಕಣವಿಯವರು ಸಮರ್ಪಕವಾಗಿ ಬಳಸಿಕೊಂಡರು. ಇದರೊಂದಿಗೆ ವಾಸ್ತವಿಕ ಪ್ರಜ್ಞೆ, ದ್ವಂದ್ವ ವಿರೋಧಾಭಾಸಗಳನ್ನು ಹಿಡಿದಿಡುವ ಬಗ್ಗೆ, ಲೋಲುಪತೆಗಳನ್ನು ದಾಟುವ ಗುಣ, ಭಾವಗೀತಾತ್ಮಕತೆ, ವ್ಯಂಗ್ಯ, ವಿಡಂಬನೆ, ವ್ಯಕ್ತಿ ನಿಷ್ಠತೆ ಮತ್ತು ಸಮಾಜ ನಿಷ್ಠತೆ, ಆಂದೋಲನ ಭಾವಗಳನ್ನು ಅವರು ಸಮೀಕರಿಸಿಕೊಂಡರು. ಹೀಗಾಗಿ ಅವರನ್ನು 'ಸಮನ್ವಯ ಕವಿ' ಎಂದು ಹೆಸರಿಸುವ ವಿಮರ್ಶ ಪರಿಪಾಠ ಬೆಳೆದುಬಂತು." ಆದರೆ ವಿಮರ್ಶಕರ ಈ ಅಭಿಪ್ರಾಯವನ್ನು ಕಣವಿ ಅವರು ನಿರಾಕರಿಸಿದ್ದರು.

ಡಾ. ಜಿ.ಎಂ. ಹೆಗಡೆಯವರು "ಚೆನ್ನವೀರ ಕಣವಿಯವರು ಭಾವಜೀವಿಯಾಗಿ, ಸ್ನೇಹಜೀವಿಯಾಗಿ, ಪ್ರೀತಿ, ಅಂತಃಕರಣಗಳಿಂದ ಮಾನವೀಯ ಸಂಬಂಧಗಳನ್ನು ಹೊಳೆ ಹೊಳೆಯಾಗಿ ಹರಿಸಿದವರು. ನವೋದಯ, ಪ್ರಗತಿಶೀಲ, ನವ್ಯ, ನವೋತ್ತರ ಕನ್ನಡ ಕಾವ್ಯ ಪರಂಪರೆಯಲ್ಲಿ ಕಣವಿಯವರ ಸೃಜನಶೀಲತೆ ಅಗಾಧವಾದದ್ದು. ನಿಸರ್ಗದ ಬಗೆಗೆ ಗಾಢವಾದ ಪ್ರೀತಿ, ಮಾನವ ಬದುಕಿನ ಉತ್ಕರ್ಷವಾದ ಬಗೆಗೆ ಪ್ರೀತಿ ತುಂಬಿದ ಕಣವಿ ಅವರ ಕವಿತೆಗಳು, ಸುಸಂಸ್ಕೃತ ಮನಸ್ಸಿನ ಪ್ರತಿಬಿಂಬವಾಗಿದೆ. ಶ್ರೇಷ್ಠ ಕವಿಗಳಾಗಿರುವಂತೆ ಸಹೃದಯಿ ವಿಮರ್ಶಕರೂ ಆಗಿದ್ದರು. ಕನ್ನಡ ಸಾಹಿತ್ಯ ಪರಂಪರೆಯನ್ನು ಸಮಕಾಲೀನ ಸಾಹಿತಿಗಳನ್ನು ಕವಿಕಾವ್ಯವನ್ನು ವಿಮರ್ಶೆಯ ನಿಕಷಕ್ಕೆ ತಂದವರು ಕಣವಿಯವರು. 'ಸಾಹಿತ್ಯ ಚಿಂತನ', 'ಕಾವ್ಯಾನುಸಂಧಾನ', 'ಸಮಾಹಿತ', 'ಸಮತೋಲನ', 'ಮಧುರಚೆನ್ನ', 'ವಚನಾತರಂಗ', ಸಾಹಿತ್ಯ ಸಾಮಾಜಿಕ ವಿಮರ್ಶಾ ಗ್ರಂಥಗಳಲ್ಲಿ ಕಣವಿಯವರ ಸಾಹಿತ್ಯ ವಿಮರ್ಶೆಯ ಸೊಗಸನ್ನು ನಾವು ಆಸ್ವಾದಿಸುತ್ತೇವೆ. ಭಾರತೀಯ ಕಾವ್ಯ ಮೀಮಾಂಸೆ, ಪಾಶ್ಚಾತ್ಯ ವಿಮರ್ಶೆ ಅಧ್ಯಯನದಿಂದ ಕಣವಿಯವರು ಸಮತೋಲನ ನಿಲುವನ್ನು ವಿಮರ್ಶೆಯಲ್ಲಿ ಪ್ರಕಟಿಸಿದ್ದಾರೆ" ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಭಾವಜೀವಿಯು ನಾನು, ನನ್ನೆದೆಯ ನಂಬಿರುವ ತುಂಬಿರುವ ಕನಸುಗಳ ಕಲ್ಪವೃಕ್ಷ' ಎಂದ ಕಣವಿಯವರು ಭಾವಗೀತೆಯ ಉತ್ಕರ್ಷದ ಕಾಲದಲ್ಲಿ ಕಾವ್ಯ ಹಾದಿಯಲ್ಲಿ ಪಯಣ ಪ್ರಾರಂಭಿಸಿದರು. ಪ್ರಗತಿಶೀಲ, ನವ್ಯ, ನವ್ಯೋತ್ತರ ಸಂದರ್ಭದಲ್ಲಿ ಕಣವಿಯವರು ತಮ್ಮ ಭಾವನೆಗಳನ್ನು ಕಾವ್ಯದ ಮೂಲಕ ಶ್ರುತಿಗೊಳಿಸಿದರು. ಸಾಹಿತ್ಯದ ಯಾವುದೇ ಪಥ, ಪ್ರಣಾಲಿಕೆಗೆ ಬದ್ಧರಾಗದೆ ಎಲ್ಲ ಕಾಲದ ಎಲ್ಲ ಮನೋಧರ್ಮದ ಚಿಂತನೆಗಳನ್ನು ತಮ್ಮದಾಗಿಸಿಕೊಂಡು ಕಾವ್ಯ ರಚಿಸಿದ ಅವರು ಶುದ್ಧ ಸಾಹಿತ್ಯದ ಪ್ರತಿನಿಧಿಗಳು. ಕಣವಿಯವರ ಕಾವ್ಯದಲ್ಲಿ ಪರಂಪರೆಯ ಅರಿವು, ಚಾರಿತ್ರಕ ಪ್ರಜ್ಞೆ, ಸಮಾಕಾಲೀನ ಸಂವೇದನೆ ಅಂತಸ್ಥವಾಗಿದೆ. 'ಏನಾದರೂ ಇರಲಿ ಹಾಡು ನಿಲ್ಲಿಸಬೇಡ, ದೀಪ ತಟ್ಟನೆ ಆರಿಹೋಗಬಹುದು' ಎಂದು ಹೇಳಿದ ಅವರು ಕವಿತೆಯ ಸೃಷ್ಟಿ ಕಾರ್ಯದಲ್ಲಿ ನಿರಂತರವಾಗಿ ತಮ್ಮ ಭಾವ ಸಂವೇದನೆಗಳನ್ನು ದಾಖಲಿಸುತ್ತಾ ಬಂದಿದ್ದರು.

**ಜನನ ಮತ್ತು ಶಿಕ್ಷಣ :** ಜೂನ್ ೨೮, ೧೯೨೮ ರಲ್ಲಿ ಗದಗ ಜಿಲ್ಲೆ ಹೊಂಬಳದಲ್ಲಿ ಶರಣ ದಂಪತಿಗಳಾದ ಸಕ್ಕರಪ್ಪ ಮತ್ತು ಪಾರ್ವತವ್ವ ಅವರ ಪುತ್ರ ರತ್ನವಾಗಿ ಜನಿಸಿದರು. ಸಕ್ರಪ್ಪನವರು ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಅವರ ಪ್ರಭಾವದಿಂದ ಚಿಕ್ಕಂದಿನಲ್ಲಿಯೇ ಸಾಹಿತ್ಯ ಪ್ರೇರಣೆ ಪಡೆದುಕೊಂಡ ಕಣವಿಯವರು ಮುಲ್ಕಿ ಪರೀಕ್ಷೆಯಲ್ಲಿ ಧಾರವಾಡ ಕೇಂದ್ರಕ್ಕೆ ಪ್ರಥಮ ಸ್ಥಾನ ಪಡೆದರು. ಧಾರವಾಡದ ಮುರುಘಾಮಠದ ಪ್ರಸಾದ ನಿಲಯದಲ್ಲಿ ಆಶ್ರಯ ಪಡೆದು 'ಆರ್.ಎಲ್.ಎಸ್. ಪ್ರೌಢಶಾಲೆಯಲ್ಲಿ ಮೆಟ್ರಿಕ್ಯೂಲೇಶನ್ ಮುಗಿಸಿ ಧಾರವಾಡದ ಪ್ರತಿಷ್ಠಿತ ಕರ್ನಾಟಕ ಕಾಲೇಜು ಸೇರಿ ಬಿ.ಎ. ವ್ಯಾಸಂಗ ಮಾಡುವ ಸಂದರ್ಭಲ್ಲಿಯೇ ಅವರ ಮೊದಲ ಕಾವ್ಯ ಸಂಕಲನ 'ಕಾವ್ಯಾಕ್ಷಿ' ಪ್ರಕಟವಾಯಿತು. ಕಣವಿಯವರು ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ದರ್ಜೆ ಹಾಗೂ ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು.

**ವೃತ್ತಿಜೀವನ :** ೧೯೫೨ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ-ವಿಸ್ತರಣ-ಪ್ರಕಟಣ ವಿಭಾಗದ ಕಾರ್ಯದರ್ಶಿಯಾಗಿ ವೃತ್ತಿಜೀವನ ಆರಭಿಸಿದರು. ನಂತರ ಅದೇ ವಿಶ್ವವಿದ್ಯಾನಿಲಯದ ಪ್ರಸಾರಂಗದ ನಿರ್ದೇಶಕರಾಗಿ, ಕನ್ನಡ ಅಧ್ಯಯನ ಪೀಠದ ಗೌರವ ಸಂದರ್ಶಕ ಪ್ರಾಧ್ಯಾಪಕರಾಗಿ, ಕಾರ್ಯನಿರ್ವಹಿಸಿ, ೧೯೮೩ ರಲ್ಲಿ ಸೇವೆಯಿಂದ ನಿವೃತ್ತರಾದರು. ಅವರು ತಮ್ಮ ಬಹುತೇಕ ವೇಳೆಯನ್ನು ಕಾವ್ಯ ರಚನೆ, ಸಾವಿರಾರು ವಿದ್ಯಾರ್ಥಿ, ಕವಿ-ಸಾಹಿತಿಗಳಿಗೆ ಮಾರ್ಗದರ್ಶನಕ್ಕೆ ಮೀಸಲಾಗಿಟ್ಟಿದ್ದರು.

ನಾಡೋಜ ಡಾ. ಚೆನ್ನವೀರ ಕಣವಿಯವರು ಎಂಥಹ ಸಂದರ್ಭದಲ್ಲೂ ಕೋಪಕ್ಕೆ ಅವಕಾಶ ಕೊಡದೆ ತಾಳ್ಮೆಗೆ ಅಗ್ರಸ್ಥಾನ ನೀಡಿದ್ದರು. ಹಾಗಾಗಿ ಎಲ್ಲರೂ ಅವರನ್ನು ಪ್ರೀತಿಸುತ್ತಿದ್ದರು, ಗೌರವಿಸುತ್ತಿದ್ದರು. ಪ್ರಜಾಪ್ರಭುತ್ವದ ಬಗ್ಗೆ ಗೌರವ, ಸಾಮಾಜಿಕ ಕಳಕಳಿ, ಜೀವನೋತ್ಸಾಹ ಅವರಲ್ಲಿ ಅಂತರ್ಗತವಾಗಿತ್ತು. ಅವರು ಯಾವುದೇ ಚುನಾವಣೆ ಇರಲಿ, ಎಂತಹ ಅನಾರೋಗ್ಯ ಇರಲಿ, ಮತ ಚಲಾಯಿಸುವ ಹಕ್ಕಿನಿಂದ ದೂರ ಸರಿದವರಲ್ಲ. ೨೦, ನವೆಂಬರ್ ೨೦೨೧ ರಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ ಹಾಗೂ ನ. ೨೮ ರಂದು ನಡೆದ ಕರ್ನಾಟಕ ವಿದ್ಯಾವರ್ಧಕ ಸಂಘದ ಚುನಾವಣೆಯಲ್ಲಿ ಮತದಾನ ಮಾಡಿ ಪ್ರಜಾಪ್ರಭುತ್ವದ ಮೌಲ್ಯವನ್ನು ಎತ್ತಿ ಹಿಡಿದಿದ್ದರು.

ಕಾಲದ ಅನನ್ಯ ಶೋಧ ಕಣವಿಯವರ ಕಾವ್ಯದ ಮುಖ್ಯ ವಸ್ತುವಾಗಿದೆ. ವ್ಯಕ್ತಿ ನಗರದ ಯಾಂತ್ರಿಕ ಜೀವನದಲ್ಲಿ ತನ್ನ ತನವನ್ನು ಕಳೆದುಕೊಳ್ಳುತ್ತಿದ್ದಾನೆ ಎಂಬ ಆತಂಕ ಅವರ ಕವಿತೆಗಳಲ್ಲಿ ಅಭಿವ್ಯಕ್ತವಾಗಿದೆ.

ಅವರ 'ಕಾಲ ನಿಲ್ಲುವುದಿಲ್ಲ', 'ಮಧ್ಯಾಹ್ನದ ಮಜಲು', 'ಕಾಲಾತೀತ', ಮೊದಲಾದ ಕವಿತೆಗಳು ಕಾಲದಂಥ ಅಮೂರ್ತ ವಸ್ತುವನ್ನು ಚಿಂತನೆಯ ನಿಕಷಕ್ಕೆ ಒಡ್ಡಿರುವುದು ಗಮನಾರ್ಹವಾಗಿದೆ. ಅವರು ಸಮಕಾಲೀನ ವಾಸ್ತವಕ್ಕೆ, ಭಾರತದ ಸಮಸ್ಯೆಗಳಿಗೆ ಸದಾ ಸ್ಪಂದಿಸುತ್ತಾ ಬಂದಿದ್ದರು. ಶೋಷಣೆ, ಅನ್ಯಾಯದ ವಿರುದ್ಧ ಪ್ರತಿಭಟನೆ, ಸಾಮಾಜಿಕ ಅಸಮಾನತೆಯ ಬಗ್ಗೆ ತೀವ್ರವಾದ ಕಾಳಜಿ, ಕಳಕಳಿ ಅವರ ಕಾವ್ಯಗಳಲ್ಲಿ ವ್ಯಕ್ತವಾಗಿದೆ. ಅವರು ಭ್ರಷ್ಟಾಚಾರ, ಮೋಸ, ವಂಚನೆಯ ವಿರುದ್ಧ ವಿಡಂಬನೆಯ ಪ್ರತಿಕ್ರಿಯೆ ವ್ಯಕ್ತಪಡಿಸುತ್ತ ಬಂದಿದ್ದರು. ಭ್ರಷ್ಟಾಚಾರದ ವಿರುದ್ಧ ಧ್ವನಿ ಎತ್ತಿದಂತೆ ತಮ್ಮ ಕವಿತೆಗಳಲ್ಲಿ ಸ್ತ್ರೀಪರ ಕಾಳಜಿ, ಸ್ತ್ರೀ ಸಂವೇದನೆಯ ವಿಚಾರಗಳಿವೆ. ಕಣವಿ ಯವರ 'ನಿಲಾಂಬಿಕೆ', ಸ್ತ್ರೀ ಕೇಂದ್ರದ ಕವಿತೆಯಾಗಿ ಪ್ರಖ್ಯಾತಿ ಹೊಂದಿದೆ. ಜೀವನಪದ್ಧತಿಯ ನರಕಯಾತನೆಯನ್ನು 'ಹಂಗರಹಳ್ಳಿ', 'ಅಂಬೇಡ್ಕರ' ಕವಿತೆಗಳಲ್ಲಿ ದಲಿತರ ನೋವಿನ ಮಿಡಿತವನ್ನು ಚೆನ್ನವೀರ ಕಣವಿಯವರು ಅನಾವರಣಗೊಳಿಸಿದ್ದಾರೆ.

**ಕಣವಿಯವರ ಸಾಹಿತ್ಯ ಸಂಪತ್ತು :**

೧೯೪೯ ರಲ್ಲಿ 'ಕಾವ್ಯಾಕ್ಷಿ' ಕವನ ಸಂಕಲನವನ್ನು ಹೊರತರುವ ಮೂಲಕ ಕಾವ್ಯಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದರು. ಒಟ್ಟು ೨೬ ಕವನ ಸಂಕಲನಗಳು, ೨೮ ಪ್ರಬಂಧ ಮತ್ತು ವಿಮರ್ಶೆ ಗ್ರಂಥಗಳನ್ನು ಬರೆದು ಲೋಕಾರ್ಪಣೆ ಮಾಡಿ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಭಾವಜೀವಿ, ಆಕಾಶಬುಟ್ಟಿ, ಮಧುಚಂದ್ರ, ದೀಪಧಾರಿ, ಮಣ್ಣಿನ ಮೆರವಣಿಗೆ, ನೆಲ-ಮುಗಿಲು, ಎರಡು ದಡ, ನಗರದಲ್ಲಿ ನೆರಳು, ಚಿರಂತನ ದಾಹ (ಆಯ್ದ ಕವನಗಳು), ಜೀವಧ್ವನಿ, ಹಕ್ಕಿಪುಚ್ಚ (ಮಕ್ಕಳ ಪದ್ಯಗಳು), ಕಾರ್ತೀಕದ ಮೋಡ, ಹೂವು ಹೊರಳುವವು ಸೂರ್ಯನ ಕಡೆಗೆ (ಆಯ್ದ ಗೇಹ ಕವನಗಳು), ಹೊಂಬೆಳಕು, ಜೀನಿಯಾ, ಕಣವಿ ಸಮಗ್ರ ಕಾವ್ಯ, ಬರೆದು ತೀರದು ಸಂಪದ, ಚಿಣ್ಣರ ಲೋಕ ತೆರೆಯೋಣ, ಮಾನಸಪೂಜೆ, ನೀವೇ ಪ್ರಮಾಣು, ಕಣವಿ ಚುಟುಕಗಳು, ಜೀವ-ಜೀವಾಳ, ಭೂಮಿ-ಬದುಕು ಅವರ ಪ್ರಮುಖ ಕಾವ್ಯ ಕೃತಿಗಳು.





ದಸರಾ ಉದ್ಘಾಟನೆಗೆ ಆಹ್ವಾನಿಸುತ್ತಿರುವುದು

**ವಿಮರ್ಶೆ-ಪ್ರಬಂಧ :**

ಸಾಹಿತ್ಯ ಚಿಂತನ, ಕಾವ್ಯಾನುಸಂಧಾನ, ಸಮಾಹಿತ, ಮಧುರಚೆನ್ನ, ಸಮತೋಲನ, ವಚನಾತರಂಗ, ಶುಭನುಡಿಯೇ ಹಕ್ಕಿ, ಸಾಹಿತ್ಯ ಸಮಾವೇಶ, ಸದ್ಭಾವ, ಕಣವಿ ಸಮಗ್ರ ಗದ್ಯ, ಬೇಂದ್ರೆ ಕಾವ್ಯದ ಕುಹುಕೂಹು, ಅವಿನಾಭಾವ, ಸ್ಮೃತಿಸೌರಭ, ನವಿಲೂರು ಮನೆಯಿಂದ, ನವ್ಯಧ್ವನಿ, ನಮ್ಮೆಲ್ಲರ ನೆಹರು, ನೈವೇದ್ಯ, ಕನ್ನಡ ಕಾಲು ಶತಮಾನ, ಸಿದ್ಧಿವಿನಾಯಕ ಮೋದಕ, ಆಧುನಿಕ ಕನ್ನಡ ಕಾವ್ಯ, ಬಾಬಾ ಫರೀದ್, ರತ್ನಸಂಪುಟ, ಸುವರ್ಣ ಸಂಪುಟವನ್ನು ರಚಿಸಿದ್ದಾರೆ.

**ಪ್ರಶಸ್ತಿ ಪುರಸ್ಕಾರಗಳು :**

ನಾಡೋಜ ಡಾ. ಕಣವಿಯವರ 'ಆಕಾಶ ಬುಟ್ಟಿ' ಕವನ ಸಂಕಲನಕ್ಕೆ ಮುಂಬೈ ರಾಜ್ಯದ ಪ್ರಥಮ ಬಹುಮಾನ, 'ದೀಪಧಾರಿ' ಕವನ ಸಂಕಲನಕ್ಕೆ ವಿಶಾಲ ಮೈಸೂರು ರಾಜ್ಯದ ಸಾಂಸ್ಕೃತಿಕ ಪ್ರಸಾರ ಇಲಾಖೆಯ ಎರಡು ಬಹುಮಾನ, ಜೀವಧ್ವನಿ ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಪಂಪ ಪ್ರಶಸ್ತಿ, ಹಂಪಿ ವಿಶ್ವವಿದ್ಯಾಲಯದ ನಾಡೋಜ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ಬೇಂದ್ರೆ ಟ್ರಸ್ಟ್‌ನಿಂದ ಅಂಬಿಕಾತನಯದತ್ತ ಪ್ರಶಸ್ತಿ, ಎನ್.ಆರ್. ಪಾಟೀಲ ಪ್ರತಿಷ್ಠಾನ (ಗುಲ್ಬರ್ಗಾ) ಪ್ರಶಸ್ತಿ, ಧಾರವಾಡ-ಹುಬ್ಬಳ್ಳಿ ಮಹಾನಗರ ಪಾಲಿಕೆಯಿಂದ ಪೌರ ಸನ್ಮಾನ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಂಸ್ಕೃತಿ ಇಲಾಖೆಯ ಎಮಿರೆಟಸ್ ಫೇಲೋಶಿಪ್, ಡಾ. ಮಲ್ಲಿಕಾರ್ಜುನ ಮನ್ಸೂರ ಪ್ರತಿಷ್ಠಾನ ಪ್ರಶಸ್ತಿ, ಬಸವರಾಜ ಮನ್ಸೂರ ಪ್ರಶಸ್ತಿ, ಭಾರತೀಯ ಲಲಿತಾ ಕಲಾ ಸಂಸ್ಥೆಯಿಂದ ಕೊಡಮಾಡುವ 'ಕರ್ನಾಟಕ ಕವಿರತ್ನ' ಪ್ರಶಸ್ತಿ, ಸಂದೇಶ ಕನ್ನಡ ಸಾಹಿತ್ಯ ಪ್ರಶಸ್ತಿ, ಉಡುಪಿ ಪೇಜಾವರ ಮಠದಿಂದ 'ಶ್ರೀಕೃಷ್ಣ' ಪ್ರಶಸ್ತಿ, ಸಿರಿಗನ್ನಡ ರಾಷ್ಟ್ರೀಯ ರತ್ನ ಪ್ರಶಸ್ತಿ, ಬೇಂದ್ರೆ ರಾಷ್ಟ್ರೀಯ ಕಾವ್ಯ ಪ್ರಶಸ್ತಿ, ಮುರುಘಾಮಠದಿಂದ 'ಮೃತ್ಯುಂಜಯ ಮಹಾಂತ' ಪ್ರಶಸ್ತಿ, ದೂರದರ್ಶನ ಚಂದನ ಪ್ರಶಸ್ತಿ, ಆಳ್ವಾಸ್ ನುಡಿಸಿರಿ ದಶಮಾನೋತ್ಸವ ಪ್ರಶಸ್ತಿ, ವಿ.ಕೃ. ಗೋಕಾಕ ಪ್ರಶಸ್ತಿ, ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ವತಿಯಿಂದ ಕೊಡುವ 'ಸಿದ್ಧಗಂಗಾಶ್ರೀ' ಪ್ರಶಸ್ತಿ, ಅ.ನ.ಕೃ. ನಿರ್ಮಾಣ ಪ್ರಶಸ್ತಿ, ವೀರಶೈವ ಸಂಸ್ಕೃತಿ ಪ್ರತಿಷ್ಠಾನ ಬೆಂಗಳೂರು ಅವರಿಂದ 'ಕಾಯಕಶ್ರೀ' ಪ್ರಶಸ್ತಿ, ಯುಕ್ತಂಬಾ ಕನ್ನಡ ಬಳಗದಿಂದ 'ಕನ್ನಡ ಕುಲತಿಲಕ' ಪ್ರಶಸ್ತಿ, ಬೆಂಗಳೂರು ಬಸವ ವೇದಿಕೆಯಿಂದ 'ಬಸವಶ್ರೀ' ಪ್ರಶಸ್ತಿ, ಸಂಕೇಶ್ವರದ ನಾಗರಿಕರಿಂದ ಪೌರಸನ್ಮಾನ, ಬೆಂಗಳೂರು ಆದರ್ಶ ಸುಗಮ ಸಂಗೀತ ಅಕಾಡೆಮಿ

ಡಾ. ಜಿ.ಎಸ್.ಎಸ್. ಅವರೊಂದಿಗೆ ಆತ್ಮೀಯತೆಯ ಕ್ಷಣಗಳು

ಟ್ರಸ್ಟ್‌ನಿಂದ 'ಸಾಹಿತ್ಯ ಚಿಂತಾಮಣಿ' ಪ್ರಶಸ್ತಿ, 'ನೆಲಮುಗಿಲು' ಕವನ ಸಂಕಲನಕ್ಕೆ ಜಚನಿ ಅವರಿಂದ 'ಕವನ ಕಲಾರವಿ' ಪ್ರಶಸ್ತಿಯಾಗಿ ಚಿನ್ನದ ಪದಕ, ಪ್ರಶಸ್ತಿಗಳನ್ನು ಪಡೆದ ಗೌರವಕ್ಕೆ ಪಾತ್ರರಾಗಿದ್ದರು.

**ಸಂದ ಗೌರವಗಳು :**

ಕೇಂದ್ರ ಸರ್ಕಾರದ ಶಿಕ್ಷಣ ಇಲಾಖೆಯ ಅಖಿಲ ಭಾರತದ ಲೇಖಕರ ಪ್ರಥಮ ಶಿಬಿರ ಕನ್ನಡ ಪ್ರತಿನಿಧಿಯಾಗಿ, ನವದೆಹಲಿಯಲ್ಲಿ ನಡೆದ ಗಣರಾಜ್ಯೋತ್ಸವ ರಾಷ್ಟ್ರೀಯ ಕವಿ ಸಮ್ಮೇಳನ, ಅಖಿಲ ಭಾರತ ಲೇಖಕರ ಸಮ್ಮೇಳನ, ಎರ್ನಾಕುಲಂ, ಕೇಂದ್ರ ಸಾಹಿತ್ಯ ಅಕಾಡೆಮಿ ಜನರಲ್ ಕೌನ್ಸಿಲ್ ಮತ್ತು ಕನ್ನಡ ಸಲಹಾ ಸಮಿತಿ ಸದಸ್ಯ, ನ್ಯಾಷನಲ್ ಬುಕ್ ಟ್ರಸ್ಟ್ ಕನ್ನಡ ಸಲಹಾ ಸಮಿತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯ, ಮೈಸೂರು ಕವಿ ಸಮ್ಮೇಳನದ ಅಧ್ಯಕ್ಷತೆ, ಬೆಂಗಳೂರು ಕನ್ನಡ ಶಕ್ತಿ ಕೇಂದ್ರದ ಗೌರವಾಧ್ಯಕ್ಷ, ಪಂಪ ಪ್ರಶಸ್ತಿ ಆಯ್ಕೆ ಸಮಿತಿ ಸದಸ್ಯ, ಹಂಪಿ ಉತ್ಸವ ಕವಿ ಸಮ್ಮೇಳನದ ಅಧ್ಯಕ್ಷತೆ, ಧರ್ಮಸ್ಥಳದ ಸಾಹಿತ್ಯ ಸಮ್ಮೇಳನದ ವಜ್ರ ಮಹೋತ್ಸವದ ಉದ್ಘಾಟನೆ, ಹಾಸನದಲ್ಲಿ ನಡೆದ ಅಖಿಲ ಭಾರತ ೬೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಆಳ್ವಾಸ್ ನುಡಿಸಿರಿ ಸರ್ವಾಧ್ಯಕ್ಷತೆ, ಮೈಸೂರು ದಸರಾ ಉದ್ಘಾಟನೆ ಮೊದಲಾದವು ಅವರಿಗೆ ಸಂದ ಗೌರವಗಳು.

**ವಿದೇಶಗಳಲ್ಲಿ :**

ನಾಡೋಜ ಡಾ. ಚೆನ್ನವೀರ ಕಣವಿಯವರು ವಿದೇಶಗಳಲ್ಲಿರುವ ಕನ್ನಡ ಸಂಘ ಸಂಸ್ಥೆಗಳ ಆಹ್ವಾನದ ಮೇರೆಗೆ ಅಮೇರಿಕಾದ ಮೇರಿಲ್ಯಾಂಡ್‌ನ ಬಾಲ್ಟಿಮೋರ್‌ನಲ್ಲಿ ಏರ್ಪಡಿಸಿದ್ದ ೬ನೇ ವಿಶ್ವ ಕನ್ನಡ ಸಮ್ಮೇಳನ (ಅಕ್ಕ ಸಮ್ಮೇಳನ) ಕವಿಗೋಷ್ಠಿ ಅಧ್ಯಕ್ಷತೆ, ದುಬೈ ಕನ್ನಡ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಗೌರವಕ್ಕೆ ಭಾಜನರಾಗಿದ್ದರು.

**ಧ್ವನಿ ಸುರಳಿಗಳು :**

ಡಾ. ಕಣವಿಯವರ ಭಾವಗೀತೆಗಳ ಧ್ವನಿ ಸುರಳಿಗಳು ಲೋಕಾರ್ಪಣೆಯಾಗಿವೆ. ಅವುಗಳಲ್ಲಿ ಜಿ.ವಿ. ಅತ್ರಿ ಸಂಗೀತ ನಿರ್ದೇಶನದ 'ಮಲ್ಲಿಗೆ ದಂಡೆ', ಲಹರಿ ಕಂಪನಿಯ 'ಒಂದು ಮುಂಜಾವಿನಲಿ', ಜಯಶ್ರೀ ಅರವಿಂದ ಸಂಗೀತ ನಿರ್ದೇಶನದ 'ಮಧುಕೋಗಿಲೆ' ಮೃತ್ಯುಂಜಯ ದೊಡವಾಡ ಸಂಗೀತ ನಿರ್ದೇಶನದ 'ಬರುವುದೆಲ್ಲ ಬರಲಿ ಬಿಡು' ಪ್ರಮುಖವಾದವುಗಳು.

**ಸಾಕ್ಷ್ಯಚಿತ್ರ :**

ಡಾ. ಕಣವಿಯವರ ಜೀವನಯಾನವನ್ನು ಕುರಿತು ರಾಜ್ಯ ವಾರ್ತಾ ಇಲಾಖೆ ಹಾಗೂ ಮೈಸೂರಿನ ಭಾಷಾ ಸಂಸ್ಥೆ ವತಿಯಿಂದ ಸಾಕ್ಷ್ಯ ಚಿತ್ರ ನಿರ್ಮಿಸಿದೆ.

**ಅಭಿನಂದನ ಗ್ರಂಥಗಳು :**

ನಾಡೋಜ ಕಣವಿಯವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಅನನ್ಯ ಕೊಡುಗೆಯನ್ನು ಕನ್ನಡ ಸಾರಸ್ವತ ಲೋಕ ಗೌರವಿಸುತ್ತಾ ಬಂದಿದೆ. ಅವರಿಗೆ ಐವತ್ತು ತುಂಬಿದಾಗ 'ಚೆಂಬೆಳಕು' ಅಭಿನಂದನ ಗ್ರಂಥ, ಎಪ್ಪತ್ತು ತುಂಬಿದಾಗ ಮುಗಿಯದ ಹಾಡು ಕಾವ್ಯಾಭಿನಂದನ ಗ್ರಂಥ, ಎಪ್ಪತ್ತೈದು ತುಂಬಿದಾಗ 'ಬೆಳ್ಳಿಕೇರಿನದಾರಿ', ಎಂಬತ್ತೊಂದು ತುಂಬಿದಾಗ ಕಣವಿಯವರ 'ಕವಿತೆ ಹೊಸ ಓದು ವಿಮರ್ಶೆ'ಯ ಗ್ರಂಥ, ಎಂಬತ್ತೈದು ತುಂಬಿದಾಗ ಚೆನ್ನವೀರ ಕಣವಿಯವರ 'ಆಯ್ದ ಕವಿತೆಗಳ ಅನುಸಂಧಾನ ಪ್ರಾಯೋಗಿಕ ವಿಮರ್ಶೆಯ' ಗ್ರಂಥ, ತೊಂಬತ್ತು ತುಂಬಿದಾಗ 'ಚೆಂಬೆಳಕಿನ ಕವಿ ಚೆನ್ನವೀರ ಕಣವಿ' ವಿಮರ್ಶೆಯ ಗ್ರಂಥ ಅರ್ಪಿತವಾಗಿವೆ.

**ಆದರ್ಶ ಕುಟುಂಬ :**

ಡಾ. ಕಣವಿಯವರ ಕೈಹಿಡಿದ ಭಾಗ್ಯವಂತೆ 'ಶಾಂತಾದೇವಿ'ಯವರು. ವಿವಾಹವಾದ ಮೇಲೆ 'ಶಾಂತದೇವಿ ಕಣವಿ' ಆದರು. ಅವರು ಕನ್ನಡದ ಹೆಸರಾಂತ ಕಥೆಗಾರ್ತಿ. ವಾಸ್ತಿ ಪರಂಪರೆಯ ವಾಸ್ತವವಾದಿ ಕಥನ ಪರಂಪರೆಯ ಖ್ಯಾತ ಲೇಖಕಿಯಾಗಿ ಪ್ರಸಿದ್ಧರಾಗಿದ್ದರು. ಅವರಿಗೆ ಶಿವಾನಂದ, ಚಂದ್ರಮೌಳಿ (ಕ್ರಿಕೆಟ್ ವಿವರಣೆಗಾರ), ಪ್ರಿಯದರ್ಶಿ, ಕರುಣ ಪ್ರಸಾದ್ ನಾಲ್ಕು ಜನ ಗಂಡು ಮಕ್ಕಳು, ರಂಜನಾ ಮಗಳು. ಎಲ್ಲರೂ ಪ್ರತಿಭಾ ಸಂಪನ್ನರು, ಸುಸಂಸ್ಕೃತರು. ಶ್ರೀಮತಿ ಶಾಂತಾದೇವಿ ಕಣವಿಯವರು ಎರಡು ವರ್ಷಗಳ ಹಿಂದೆ ವಿಧಿವಶರಾದರು. ಅವರ ಅಗಲಿಕೆಯ ನಂತರ ಕಣವಿಯವರು ಅಂತರ್ಮುಖಿಯಾಗಿದ್ದರು.

**ಶ್ರೀಮಠದೊಂದಿಗೆ :**

ನಾಡೋಜ ಡಾ. ಚೆನ್ನವೀರ ಕಣವಿಯವರು ಶ್ರೀ ಸಿದ್ಧಗಂಗಾ ಮಠ ಹಾಗೂ ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ



'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ

ಭಾಗವಹಿಸಿ ವಿದ್ವತ್ ಪೂರ್ಣವಾದ ಉಪನ್ಯಾಸ ನೀಡಿದ್ದರು. ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ ಹೊರತಂದ ಬೃಹತ್ ಗ್ರಂಥ 'ಅನುಭಾವಪಥ' ಸಂಪಾದಕರಲ್ಲಿ ಒಬ್ಬರಾಗಿದ್ದರು. ಅವರೊಂದಿಗೆ ನಾನೂ ಒಬ್ಬ ಸಂಪಾದಕನಾಗಿ ಸೇವೆ ಸಲ್ಲಿಸುವ ಭಾಗ್ಯ ನನ್ನದಾಗಿತ್ತು. ಸಂಪಾದಕ ಸಮಿತಿ ಸಭೆಯಲ್ಲಿ ಭಾಗವಹಿಸಿ ಅನೇಕ ಮೌಲಿಕ ಸಲಹೆಗಳನ್ನು ನೀಡಿ ಗ್ರಂಥ ವಿಶಿಷ್ಟವಾಗಿ, ಸರ್ವಾಂಗ ಸುಂದರವಾಗಿ ಹೊರಬರಲು ಅಮೂಲ್ಯ ಕೊಡುಗೆ ನೀಡಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

೨೦೧೭ ರಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದಿಂದ ಕೊಡಮಾಡುವ 'ಸಿದ್ಧಗಂಗಾಶ್ರೀ' ಪ್ರತಿಷ್ಠಿತ ಪ್ರಶಸ್ತಿಗೆ ಭಾಜನರಾಗಿದ್ದರು. ಶ್ರೀಮಠದಲ್ಲಿ ನಡೆದ ಸಮಾರಂಭದಲ್ಲಿ ಭಾಗವಹಿಸಿ ಪ್ರಶಸ್ತಿ ಸ್ವೀಕರಿಸಲು ಅನಿವಾರ್ಯ ಕಾರಣಗಳಿಂದ ಸಾಧ್ಯವಾಗಿರಲಿಲ್ಲ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆದೇಶದಂತೆ ಡಿಸೆಂಬರ್ ೨೧, ೨೦೧೭ ರಂದು ಧಾರವಾಡದ ಅವರ ನಿವಾಸ ಚೆಂಬೆಳಕಿಗೆ ಹೋಗಿ ಪ್ರಶಸ್ತಿ ಪ್ರದಾನ ಮಾಡಲಾಯಿತು. ಶ್ರೀಮಠದ ವತಿಯಿಂದ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯ, ಸಿದ್ಧಗಂಗಾ ಮಾಸಪತ್ರಿಕೆ ಸಂಪಾದಕರಾಗಿದ್ದ ಪ್ರೊ. ಹೆಚ್.ವಿ. ವೀರಭದ್ರಯ್ಯ, ಪತ್ರಿಕೆ ಬಳಗದ ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಕೆ.ಬಿ. ಶಿವಶಂಕರಯ್ಯ, ಶ್ರೀ ಬಿ. ಪ್ರಕಾಶ್, ಹಳೆಯ ವಿದ್ಯಾರ್ಥಿಗಳಾದ ಶ್ರೀ ರಾಜಶೇಖರಯ್ಯ, ಶ್ರೀ ಸದಾಶಿವಯ್ಯ ಹಾಗೂ ಹಿರಿಯ ವಿದ್ವಾಂಸರಾದ ಡಾ. ಗುರುಲಿಂಗ ಕಾಪಸೆ ಮೊದಲಾದ ಸಾಹಿತಿಗಳ ಉಪಸ್ಥಿತಿಯಲ್ಲಿ ನಾಡೋಜ ಡಾ. ಚೆನ್ನವೀರ ಕಣವಿ ದಂಪತಿಗಳಿಗೆ ಪ್ರದಾನ ಮಾಡಲಾಯಿತು. ಪ್ರಶಸ್ತಿ, ಒಂದು ಲಕ್ಷ ರೂ. ನಗದು, ಅಭಿನಂದನಾ ಪತ್ರ ಹಾಗೂ ಸ್ಮರಣಿಕೆಯನ್ನು ಒಳಗೊಂಡಿತ್ತು.

ಪ್ರಶಸ್ತಿ ಸ್ವೀಕರಿಸಿ ಕೃತಜ್ಞತಾ ನುಡಿಗಳನ್ನಾಡಿದ ಡಾ. ಕಣವಿಯವರು "ನನಗೆ ಸಿದ್ಧಗಂಗಾಶ್ರೀ ಪ್ರಶಸ್ತಿ ಲಭಿಸಿದ್ದು ಅತ್ಯಂತ ಸಂತಸ ತಂದಿದೆ. ನನಗೆ ರಾಷ್ಟ್ರಕವಿ, ಜ್ಞಾನಪೀಠ, ಪದ್ಮಶ್ರೀ ಯಾವ ಬಿರುದು ಬೇಕಿಲ್ಲ. ಅದಕ್ಕಿಂತ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಪರಮೋಚ್ಛವಾಗಿದೆ. ಸಿದ್ಧಗಂಗಾ ಮಠ ಜಾತ್ಯಾತೀತವಾದ ಮಠ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು ವಿದ್ಯಾರ್ಥಿಗಳಲ್ಲಿ ದೇವರನ್ನು ಕಂಡವರು. ಅವರ ಕಾಯಕ, ದಾಸೋಹ, ಸಮಯನಿಷ್ಠೆ, ಪವಿತ್ರವಾದ ಶಿವಯೋಗಾನುಷ್ಠಾನದ ಸಂಭ್ರಮ ನೋಡಿ ಮೂಕವಿಸ್ಮಿತ ನಾಗಿದ್ದೇನೆ" ಎಂದು ಭಾವುಕರಾಗಿ ನುಡಿದಿದ್ದರು. ಡಾ. ಕಣವಿಯವರ ಕುಟುಂಬದವರು, ಸಾಹಿತಿ ದಿಗ್ಗಜರು ಭಾಗವಹಿಸಿದ್ದ ಸಮಾರಂಭ ಮರೆಯಲಾಗದ ಅಪರೂಪದ ಕ್ಷಣಗಳಾಗಿದ್ದವು.

ತೊಂಬತ್ತೂರು ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸ್ವೀಕರಿಸಿ ತುಂಬು ಜೀವನ ನಡೆಸಿದ್ದ ನಾಡೋಜ ಡಾ. ಕಣವಿಯವರು ಫೆಬ್ರವರಿ ೧೬, ೨೦೨೨ ರಂದು ಬಾಳಯಾನ ಮುಗಿಸುವುದರ ಮೂಲಕ ಚೆಂಬೆಳಕಿನ ನಂದಾದೀವಿಗೆ ಬೆಳಕಿನಲ್ಲಿ ಲೀನವಾದರು. ಆದರೆ ಅವರು ಕೊಟ್ಟು, ಬಿಟ್ಟು ಹೋದ ಸಾಹಿತ್ಯ ಸಂಪತ್ತು ಎಂದಿಗೂ ಕರಗುವುದಿಲ್ಲ. ನಾಡಿಗೆ, ಕನ್ನಡ ಸಾರಸ್ವತ ಲೋಕಕ್ಕೆ ಅಂತಹ ಅನನ್ಯ ಕೊಡುಗೆಯನ್ನು ನೀಡಿದ ಮರೆಯಲಾಗದ ಮಾಣಿಕ್ಯ.







ವರದಿ

# ಸುವರ್ಣ ಸಂಭ್ರಮದೊಂದಿಗೆ ನಡೆದ ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ

ವರದಿ : ಕೆ.ಎಸ್. ಉಮಾಮಹೇಶ್ *



ಶ್ರೀ ಸಿದ್ಧಗಂಗಾ ಮಠದಲ್ಲಿ ಪ್ರತಿವರ್ಷವು ಮಹಾಶಿವರಾತ್ರಿಯ ಸಂದರ್ಭದಲ್ಲಿ ಜರುಗುವ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ ಮಹೋತ್ಸವದ ಅಂಗವಾಗಿ ೧೫ ದಿವಸಗಳ ಕಾಲ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ಕಳೆದ ೫೮ ವರ್ಷಗಳಿಂದಲೂ ವ್ಯವಸ್ಥಿತವಾಗಿ ಅಚ್ಚುಕಟ್ಟಾಗಿ ನಡೆಸಿಕೊಂಡು ಬರಲಾಗುತ್ತಿದೆ. ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದೂರದೃಷ್ಟಿಯ ಫಲವಾಗಿ, ಜಾತ್ರೆಗೆ ಬರುವ ಲಕ್ಷಾಂತರ ಗ್ರಾಮಿಣ ರೈತಾಪಿ ವರ್ಗದವರಿಗೆ ಕೃಷಿ ಮತ್ತು ತಂತ್ರಜ್ಞಾನದಲ್ಲಿ ಮಾಹಿತಿಗಳನ್ನು ನೀಡಿ ಅವರನ್ನು ಇನ್ನೂ ಹೆಚ್ಚಿನ ವೃತ್ತಿಪರರನ್ನಾಗಿಸುವ ದೃಷ್ಟಿಯಿಂದ ೧೯೬೪ರ ರಲ್ಲಿ ಶ್ರೀಗಳವರು ವಸ್ತುಪ್ರದರ್ಶನವನ್ನು ಪ್ರಾರಂಭಿಸಿದರು. ಸಣ್ಣ ಪ್ರಮಾಣದಲ್ಲಿ ಆರಂಭವಾದ ವಸ್ತುಪ್ರದರ್ಶನ ಬೃಹದಾಕಾರಾವಾಗಿ ಬೆಳೆದು ರಾಜ್ಯ ಹಾಗು ರಾಷ್ಟ್ರಮಟ್ಟದಲ್ಲಿ ಮನ್ನಣೆ ಪಡೆದಿದೆ.

ವಸ್ತುಪ್ರದರ್ಶನದಲ್ಲಿ ರಾಜ್ಯ ಹಾಗು ಕೇಂದ್ರ ಸರ್ಕಾರದ ಮಳಿಗೆಗಳು, ಖಾಸಗಿ ಉದ್ದಿಮೆಗಳು, ಬ್ಯಾಂಕ್‌ಗಳು, ಸ್ವಸಹಾಯ ಸಂಘಗಳು, ಆಸ್ಪತ್ರೆಗಳ ಮಳಿಗೆಗಳು ಜನರನ್ನು ಆಕರ್ಷಿಸುತ್ತವೆ. ಪ್ರತಿದಿವಸ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಸರಾಂತ ಕಲಾವಿದರು ಸಂಗೀತ, ನೃತ್ಯ, ನಾಟಕ, ಯಕ್ಷಗಾನ, ಜಾದು, ಮೊದಲಾದವುಗಳನ್ನು ಪ್ರದರ್ಶಿಸುವುದರ ಮೂಲಕ ಕಲೆಯ ರಸದೌತಣವನ್ನೇ ಉಣಬಡಿಸುತ್ತಿದ್ದಾರೆ. ಜೊತೆಗೆ ವಸ್ತುಪ್ರದರ್ಶನದಲ್ಲಿ ಅಮ್ಯೂಸ್‌ಮೆಂಟ್ ಪಾರ್ಕ್, ಫುಡ್‌ಪಾರ್ಕ್ ವ್ಯವಸ್ಥೆಯನ್ನು ಮಾಡಲಾಗಿದೆ. ಹೀಗಾಗಿ ಪ್ರತಿವರ್ಷವು ಲಕ್ಷಾಂತರ ಮಂದಿ ವಸ್ತುಪ್ರದರ್ಶನವನ್ನು ವೀಕ್ಷಿಸಿ ಅದರ ಪ್ರಯೋಜನವನ್ನು ಪಡೆದುಕೊಳ್ಳುತ್ತಿದ್ದಾರೆ.

ಈ ವರ್ಷ ವಸ್ತುಪ್ರದರ್ಶನವು ದಿನಾಂಕ ೧೮-೦೨-೨೦೨೨ ರಿಂದ ೦೪-೦೨-೨೦೨೨ ರವರೆಗೆ ಅದ್ದೂರಿಯಾಗಿ ನಡೆಯುವುದರ ಜೊತೆಗೆ ಜನರನ್ನು ಆಕರ್ಷಿಸುವಲ್ಲಿ ದಾಖಲೆಯನ್ನೇ ನಿರ್ಮಿಸಿತು. ಕಳೆದೆರಡು ವರ್ಷಗಳಿಂದಲೂ ಕೋವಿಡ್ ಕಾರಣದಿಂದ ಜನಸಂದಣಿ ಕಡಿಮೆ ಇರುತ್ತಿತ್ತು. ಈ ಬಾರಿ ಕೋವಿಡ್ ಪ್ರಭಾವ ಕಡಿಮೆಯಾದ ಕಾರಣ ಜಾತ್ರೆ ಹಾಗೂ ವಸ್ತುಪ್ರದರ್ಶನದಲ್ಲಿ ಪ್ರತಿದಿವಸವೂ ಕಿಕ್ಕಿರಿದ ಜನಸಂದಣಿ ಇರುತ್ತಿತ್ತು. ಅಂತೆಯೇ ಈ ವರ್ಷ ವಸ್ತುಪ್ರದರ್ಶನದ ಸುವರ್ಣ ಮಹೋತ್ಸವವು ಜರುಗಿದ್ದಲ್ಲದೆ "ಸುವರ್ಣದರ್ಶನ" ಎಂಬ ಸ್ಮರಣ ಸಂಚಿಕೆಯನ್ನು ಲೋಕಾರ್ಪಣೆ ಮಾಡಲಾಯಿತು.

ದಿನಾಂಕ ೧೮-೦೨-೨೦೨೨ ರಂದು ವಸ್ತು ಪ್ರದರ್ಶನದ ಉದ್ಘಾಟನಾ ಸಮಾರಂಭವು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಜರುಗಿತು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಬಿ.ಸಿ. ನಾಗೇಶ್‌ರವರು ಉದ್ಘಾಟನೆ ನೆರವೇರಿಸಿ ಮಾತನಾಡುತ್ತಾ, "ರೈತರ ಆದಾಯ ಹೆಚ್ಚಿಸುವ ಯೋಜನೆಗಳನ್ನು ಸರ್ಕಾರ ಇಂದು ರೂಪಿಸುತ್ತಿದೆ. ಆದರೆ ಸಿದ್ಧಗಂಗಾ ಶ್ರೀಗಳವರು ೫೮ ವರ್ಷಗಳ ಹಿಂದೆಯೇ ಈ ಯೋಜನೆ ರೂಪಿಸಿದ್ದರು ಎಂದರಲ್ಲದೆ, ಸಮಾಜದ ಒಟ್ಟು ವ್ಯವಸ್ಥೆಯಲ್ಲಿ ಜನರಿಗೆ ತೋರಿಸುವ ಹಾಗೂ ಅವರ ಜ್ಞಾನಾಭಿವೃದ್ಧಿಗೆ ಪೂರಕವಾಗುವಂತಹ ವಸ್ತುಪ್ರದರ್ಶನದ ವ್ಯವಸ್ಥೆಯನ್ನು ೧೯೬೪ರಲ್ಲಿಯೇ ಮಾಡಿ, ನಿರಂತರವಾಗಿ ನಡೆಸಿಕೊಂಡು ಬರುತ್ತಿರುವ ಕಾರ್ಯ ಶ್ಲಾಘನೀಯವಾದುದು" ಎಂದು ತಿಳಿಸಿದರು.

* ನಿವೃತ್ತ ಉಪ ಪ್ರಾಂಶುಪಾಲರು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ







ಸಮಾರಂಭದಲ್ಲಿ ಭಾಗವಹಿಸಿದ್ದ ತುಮಕೂರು ನಗರ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್ ಮಾತನಾಡಿ "ಶ್ರೀ ಸಿದ್ಧಗಂಗಾ ಮಠವು ವಸ್ತುಪ್ರದರ್ಶನವನ್ನು ಆಯೋಜಿಸಿ ಐದೂವರೆ ದಶಕಗಳಿಂದಲೂ ಆಕರ್ಷಣೆ ಕಡಿಮೆಯಾಗದಂತೆ ನಿರ್ವಹಿಸಿಕೊಂಡು ಬರುತ್ತಿರುವುದಕ್ಕೆ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದೂರದೃಷ್ಟಿಯೇ ಕಾರಣ, ರೈತರು ವೈಜ್ಞಾನಿಕವಾಗಿ ಕೃಷಿಯಲ್ಲಿ ತೊಡಗಿಸಿಕೊಳ್ಳುವಂತೆ ವಸ್ತುಪ್ರದರ್ಶನವು ನೀಡುತ್ತಿರುವ ಮಾರ್ಗದರ್ಶನ ಅಭಿನಂದನೀಯ" ಎಂದು ತಿಳಿಸಿದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ "ಕೃಷಿ ಮತ್ತು ಕೈಗಾರಿಕೆ ಪರಸ್ಪರ ಪೂರಕವಾದ ಅಂಶಗಳು. ಒಂದನ್ನು ಬಿಟ್ಟು ಇನ್ನೊಂದು ಇರಲು ಸಾಧ್ಯವಿಲ್ಲ. ಕೃಷಿಯು ಅನ್ನ ನೀಡಿದರೆ ಕೈಗಾರಿಕೆಯು ಉದ್ಯೋಗ ನೀಡಿ ಜೀವನಾಧಾರ ಕಲ್ಪಿಸಿದೆ. ವಸ್ತುಪ್ರದರ್ಶನಕ್ಕೆ ಸರ್ಕಾರವು ನೀಡುತ್ತಿರುವ ಬೆಂಬಲ ಹಾಗೂ ಪ್ರೋತ್ಸಾಹವೇ ಇದರ ಯಶಸ್ಸಿಗೆ ಪ್ರಮುಖ ಕಾರಣ" ಎಂದು ತಿಳಿಸಿದರು. ಸಮಾರಂಭದಲ್ಲಿ ತುಮಕೂರು ಮಹಾನಗರ ಪಾಲಿಕೆ ಮೇಯರ್ ಶ್ರೀ ಬಿ.ಜಿ. ಕೃಷ್ಣಪ್ಪ, ವಸ್ತುಪ್ರದರ್ಶನದ ಸಮಿತಿ ಕಾರ್ಯದರ್ಶಿ ಪ್ರೊ॥ ಬಿ.ಗಂಗಾಧರಯ್ಯ ಮೊದಲಾದವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ದಿನಾಂಕ ೨೬-೦೨-೨೦೨೨ ರಂದು ವಸ್ತು ಪ್ರದರ್ಶನದ ಆವರಣದಲ್ಲಿ ಸುವರ್ಣ ಮಹೋತ್ಸವ ಸಮಾರಂಭವನ್ನು ಏರ್ಪಡಿಸಲಾಗಿದ್ದು ವಿಶೇಷ. ೫೦ ವರ್ಷಗಳು ತುಂಬಿದಾಗಲೇ ಸುವರ್ಣ ಮಹೋತ್ಸವದ ಆಚರಣೆ ಹಾಗೂ ಸ್ಮರಣ ಸಂಚಿಕೆ ಪ್ರಕಟಣೆಯ ಬಗ್ಗೆ ಚರ್ಚೆಗಳು ಆರಂಭವಾದವು. ವರ್ಷದಿಂದ ವರ್ಷಕ್ಕೆ ಮುಂದೂಡುತ್ತಾ ಬಂದು, ಕಳೆದೆರಡು ವರ್ಷಗಳಿಂದ ಕೋವಿಡ್ ಕಾರಣದಿಂದ ಆಚರಿಸಲಾಗಿರಲಿಲ್ಲ. ಹಾಗಾಗಿ ಈ ವರ್ಷ ಸುವರ್ಣ ಮಹೋತ್ಸವ ಹಾಗೂ ಸ್ಮರಣ ಸಂಚಿಕೆ "ಸುವರ್ಣ ದರ್ಶನ"ದ ಬಿಡುಗಡೆ ಸಮಾರಂಭವು ಸಹ ಅರ್ಥಪೂರ್ಣವಾಗಿ ನೆರವೇರಿತು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಜರುಗಿದ ಕಾರ್ಯಕ್ರಮದ ಉದ್ಘಾಟನೆಯನ್ನು ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಎಂ. ರುದ್ರೇಶ್‌ರವರು ನೆರವೇರಿಸಿದರು. ಅವರು ಮಾತನಾಡಿ "ನಡೆದಾಡುವ ದೇವರ ಕ್ಷೇತ್ರದಲ್ಲಿ ಯಾವುದೇ ಜಾತಿಮತ-ಧರ್ಮಗಳ ಭೇದಭಾವವಿಲ್ಲದೆ ಅನ್ನ-ಅಕ್ಷರ-ಆಶ್ರಯವನ್ನು ನೀಡುತ್ತಿರುವುದು ಶ್ರೀಮಠದ ಹೆಮ್ಮೆಯ ಪರಂಪರೆಯಲ್ಲಿ ಹಾಸುಹೊಕ್ಕಾಗಿದೆ. ಪರಮಪೂಜ್ಯ ಹಿರಿಯ ಗುರುಗಳಾದ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಹುಟ್ಟೂರು ವೀರಾಪುರದಲ್ಲಿ ೧೧೧ ಅಡಿ ಎತ್ತರದ ಶ್ರೀಗಳವರ ಪ್ರತಿಮೆ ನಿರ್ಮಾಣದ ಕಾರ್ಯ ಪ್ರಗತಿಯಲ್ಲಿದೆ. ಸರ್ಕಾರವೇ ಇದರ ಸಂಪೂರ್ಣ ಜವಾಬ್ದಾರಿ ಹೊತ್ತಿದ್ದು, ಶ್ರೀಗಳವರ ಜೀವನ ಆಧಾರಿಸಿದ ಕಿರುಚಿತ್ರಕ್ಕಾಗಿ ಚಿತ್ರೀಕರಣದ ಸಿದ್ಧತೆಯೂ ನಡೆದಿದೆ" ಎಂದರು.

ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ "ಸುವರ್ಣ ದರ್ಶನ" ಲೋಕಾರ್ಪಣೆ ಮಾಡಿದ ಕರ್ನಾಟಕ ಪ್ರದೇಶ ಗಡಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ॥ ಸಿ. ಸೋಮಶೇಖರ್ ಮಾತನಾಡಿ "ಸುಮಾರು ಐವತ್ತೆಂಟು ವರ್ಷಗಳ ಹಿಂದೆ ಪ್ರಾರಂಭವಾದ ವಸ್ತುಪ್ರದರ್ಶನ ಇಂದು ರಾಜ್ಯಕ್ಕೆ ಮಾದರಿಯಾಗಿ ಮೊದಲನೆಯ ಸ್ಥಾನದಲ್ಲಿ ಗುರುತಿಸಿಕೊಂಡಿದೆ. ವಿಶ್ವವಿಖ್ಯಾತಿಯನ್ನು ಪಡೆದಿದೆ. ೧೨ನೆಯ ಶತಮಾನದ ಕಾಯಕದಲ್ಲಿ ನಂಬಿಕೆಯಿಟ್ಟಿದ್ದ ಬಸವಣ್ಣನವರೇ ಮೊದಲಾದ ಎಲ್ಲಾ ವಚನಕಾರರನ್ನು ಲಿಂಗೈಕ್ಯ ಡಾ॥ ಶ್ರೀಶ್ರೀ ಶ್ರೀಶಿವಕುಮಾರ ಮಹಾಸ್ವಾಮಿಗಳವರಲ್ಲಿ ಕಂಡಿದ್ದೇವೆ" ಎಂದು ತಿಳಿಸಿದರು.

ಆಶೀರ್ವಚನ ನೀಡಿದ ಪರಮಪೂಜ್ಯ ಶ್ರೀ ಶ್ರೀಗಳವರು "ವಸ್ತುಪ್ರದರ್ಶನವು ಶಿಕ್ಷಣ, ಮಾಹಿತಿ ಹಾಗೂ ಮನರಂಜನೆ ನೀಡುವ ಮೂಲಕ ಜನರಿಗೆ ಹತ್ತಿರವಾಗಿದೆ. ಪೂಜ್ಯ ಹಿರಿಯ ಗುರುಗಳ ಸತ್‌ಸಂಕಲ್ಪ ಹಾಗೂ ದೂರದೃಷ್ಟಿಯ ಫಲವಾಗಿ ಇಂದು ಅನೇಕ ಸತ್ಕಾರ್ಯಗಳು ನಡೆದುಕೊಂಡು ಬರುತ್ತಿದ್ದು, ಅಂತಹ ಮಹತ್ವದ ಕಾರ್ಯಗಳಲ್ಲಿ ವಸ್ತುಪ್ರದರ್ಶನವು ಪ್ರಮುಖವಾದುದು" ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಕಳೆದ ೩೫ ವರ್ಷಗಳಿಂದಲೂ ವಸ್ತು ಪ್ರದರ್ಶನದ ಸಮಿತಿಯ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿರುವ ಪ್ರೊ॥ ಬಿ. ಗಂಗಾಧರಯ್ಯನವರನ್ನು ಶ್ರೀಶ್ರೀಗಳವರು ಗೌರವಿಸಿ ಸನ್ಮಾನಿಸಿದರು.

ಹದಿನೈದು ದಿವಸಗಳು ಯಶಸ್ವಿಯಾಗಿ ನಡೆದ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭವು ದಿನಾಂಕ ೦೪-೦೩-೨೦೨೨ ರಂದು ನೆರವೇರಿತು. ಪರಮಪೂಜ್ಯರ ದಿವ್ಯ ಸಾನ್ನಿಧ್ಯದಲ್ಲಿ ಜರುಗಿದ ಸಮಾರಂಭದ ಅಧ್ಯಕ್ಷತೆಯನ್ನು ತುಮಕೂರು ಗ್ರಾಮಾಂತರ ಶಾಸಕರಾದ ಶ್ರೀ ಡಿ.ಸಿ. ಗೌರಿಶಂಕರ್ ವಹಿಸಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ "ಮೈಸೂರು ದಸರಾ ವಸ್ತುಪ್ರದರ್ಶನ ಹೊರತುಪಡಿಸಿದರೆ ರೈತರು ಮತ್ತು ಕಾರ್ಮಿಕರಿಗೆ, ಜನಸಾಮಾನ್ಯರಿಗೆ ಅನುಕೂಲವಾಗುವಂತಹ ವಸ್ತುಪ್ರದರ್ಶನವನ್ನು ನಡೆಸುತ್ತಿರುವ ಏಕೈಕ ಸಂಸ್ಥೆ ಎಂದರೆ ಅದು ಶ್ರೀ ಸಿದ್ಧಗಂಗಾಮಠ ಮಾತ್ರ ಎಂದು ತಿಳಿಸಿದರಲ್ಲದೆ ರೈತರು ಮತ್ತು ಜನಸಾಮಾನ್ಯರಿಗೆ ವಸ್ತುಪ್ರದರ್ಶನದಿಂದ ಹೆಚ್ಚು





ಅನುಕೂಲವಾಗುತ್ತಿದೆ ಎಂದರಲ್ಲದೆ, ನಮ್ಮ ತಂದೆ ಶ್ರೀ ಚನ್ನಿಗಪ್ಪನವರ ಕಾಲದಿಂದಲೂ ನಮ್ಮ ಕುಟುಂಬ ಹಾಗೂ ಶ್ರೀ ಸಿದ್ಧಗಂಗಾ ಮಠದ ನಡುವೆ ಅವಿನಾಭಾವ ಸಂಬಂಧವಿದೆ. ಶ್ರೀಮಠದ ಆಶ್ರಯದಲ್ಲೇ ಬೆಳೆದುದ್ದರಿಂದಲೇ ನಮ್ಮ ತಂದೆಯವರು ಇಷ್ಟು ಎತ್ತರಕ್ಕೆ ಬೆಳೆಯಲು ಸಾಧ್ಯವಾಯಿತು. ನಮ್ಮ ಉಸಿರಿರುವವರೆಗೂ ನಾವು ಶ್ರೀಮಠದ ಭಕ್ತರಾಗಿಯೇ ಬದುಕಲು ಇಚ್ಛಿಸುತ್ತೇವೆ" ಎಂದು ತಿಳಿಸಿದರು.

ಸಮಾರೋಪ ಭಾಷಣ ಮಾಡಿದ ಲೋಕಸಭಾ ಸದಸ್ಯರಾದ ಜಿ.ಎಸ್. ಬಸವರಾಜು ಅವರು ಮಾತನಾಡಿ "ದೇಶಕ್ಕೆ ಅನ್ನ ನೀಡುವ ರೈತನಿಗೆ ಅಗತ್ಯ ಮಾಹಿತಿ ನೀಡಬೇಕೆಂಬ ಉದ್ದೇಶದಿಂದ ಶ್ರೀಗಳವರು ಪ್ರಾರಂಭಿಸಿದ ಈ ವಸ್ತುಪ್ರದರ್ಶನ ಇಂದು ಸಾವಿರಾರು ರೈತರಿಗೆ ಮಾಹಿತಿ ನೀಡುವ ಕೇಂದ್ರವಾಗಿದೆ. ಅಲ್ಲದೆ ಹೊಸ ಹೊಸ ಕೈಗಾರಿಕೆಗಳ ತಾಂತ್ರಿಕತೆಯ ಫಲಗಳನ್ನು ಕಡಿಮೆ ಖರ್ಚಿನಲ್ಲಿ ಹೇಗೆ ಪಡೆಯಬಹುದು ಎಂಬುದನ್ನು ಇದು ತೋರಿಸಿಕೊಟ್ಟಿದೆ" ಎಂದು ಪ್ರಶಂಸಿಸಿದರು.

ಉತ್ತಮ ಪ್ರದರ್ಶನ ತೋರಿದ ಎಲ್ಲಾ ಇಲಾಖೆಗಳಿಗೆ ಬಹುಮಾನ ವಿತರಿಸಿದ ಜಿಲ್ಲಾಧಿಕಾರಿಗಳಾದ ಡಾ॥ ವೈ.ಎಸ್.



ಪಾಟೀಲ್ ಮಾತನಾಡಿ "ಈ ಹಿಂದಿನ ಸತತ ಎರಡು ವರ್ಷಗಳು ಕೊರೋನಾ ಕಾರಣದಿಂದ ಸಿದ್ಧಗಂಗಾ ಜಾತ್ರೆಯ ಆಚರಣೆಯನ್ನು ಸರಿಯಾದ ರೀತಿಯಲ್ಲಿ ಆಚರಿಸಲಾಗಿರಲಿಲ್ಲ. ಆದರೆ ಈ ವರ್ಷ ಜಾತ್ರೆ ಹಾಗೂ ವಸ್ತುಪ್ರದರ್ಶನದಲ್ಲಿ ಜನ ಹೆಚ್ಚು ಸಂಭ್ರಮದಿಂದ ಭಾಗವಹಿಸಿದ್ದಾರೆ. ಕೋವಿಡ್ ನಿಯಮಗಳನ್ನು ಪಾಲಿಸುತ್ತಲೇ ಭಕ್ತರ ಆರೋಗ್ಯದ ಕಡೆಗೂ ಗಮನ ಹರಿಸಲಾಗಿದೆ. ಜನರಲ್ಲಿ ಹೊರಗೆ ಬರಬೇಕೆಂಬ ತುಡಿತಕ್ಕೆ ಶ್ರೀ ಸಿದ್ಧಗಂಗಾ ಜಾತ್ರೆಯು ಅವಕಾಶ ಕಲ್ಪಿಸಿದೆ. ಜಿಲ್ಲಾಡಳಿತ ಹಾಗೂ ಸ್ವಾಮೀಜಿಯವರ ಆಶಯಗಳು ಈಡೇರಿವೆ" ಎಂದು ತಿಳಿಸಿದರು.

ಸಮಾರಂಭದಲ್ಲಿ ಆಶೀರ್ವಚನ ನೀಡಿದ ಶ್ರೀಗಳವರು ವಸ್ತುಪ್ರದರ್ಶನ ಸಮಿತಿಯ ಸಂಘಟಿತ ಪ್ರಯತ್ನ ಇದರ ಯಶಸ್ಸಿಗೆ ಕಾರಣ. ಕಾರ್ಯದರ್ಶಿ ಪ್ರೊ॥ ಬಿ. ಗಂಗಾಧರಯ್ಯ, ಜಂಟಿ ಕಾರ್ಯದರ್ಶಿಗಳಾದ ಶ್ರೀ ಎಸ್. ಶಿವಕುಮಾರ್ ಹಾಗೂ ಕೆಂ.ಬ. ರೇಣುಕಯ್ಯ ಹಾಗೂ ಎಲ್ಲಾ ಉಪಸಮಿತಿಗಳ ಸದಸ್ಯರ ಶ್ರಮವನ್ನು ಪ್ರಶಂಸಿಸಿದರು.

ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ರಾಹುಲ್‌ಕುಮಾರ್, ಎ.ಡಿ.ಪಿ ಶ್ರೀ ಚನ್ನಬಸಪ್ಪ, ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಡಾ॥ ಕೆ. ವಿದ್ಯಾಕುಮಾರಿ, ನಗರಪಾಲಿಕೆ ಆಯುಕ್ತರಾದ ಶ್ರೀಮತಿ ಕೆ. ರೇಣುಕಾ, ಮೈದಾಳ ಗ್ರಾಮ ಪಂಚಾಯಿತಿ ಅಧ್ಯಕ್ಷೆ ಶ್ರೀಮತಿ ಮಾಲಾ ಮಂಜುನಾಥ್ ಮೊದಲಾದವರು ಭಾಗವಹಿಸಿದ್ದರು. ಈ ವರ್ಷ ಕೃಷಿ, ಅರಣ್ಯ ಮತ್ತು ತೋಟಗಾರಿಕಾ ಇಲಾಖೆಗಳು ಪ್ರಥಮ ಬಹುಮಾನದೊಂದಿಗೆ ಪಾರಿತೋಷಕವನ್ನು ಪಡೆದವು.

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69






To




If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru 10. Ph : 23404232